Photo by J. V. Sivarama Sastry



ಬಹುಮಾನ ಪಡೆದ ಶೀರ್ಷಿಕೆ

ಒಂಟಿಯಾಗಿ ಕೂಗಲು
ಅರಣ್ಯರೋದನ

ಕಳಿಸಿದವರು:
ಇ. ಎಸ್. ರಾವ್

# ಚಂದಮಾಮ

## ಈ ಸಂಚಿಕೆಯಲ್ಲಿ



ಇವೆಲ್ಲಾ ತುಂಬಿವೆ.

---


**ಚಂದಮಾಮ** (ಹೊರಡುವ ಎಲ್ಲಾ ಭಾಷೆಗಳಲ್ಲಿಯೂ)

**ಬಿಡಿ ಪ್ರತಿ 0-8-0 ವಾರ್ಷಿಕ ಚಂದಾ ರೂ. 6-0-0**



ಅಧ್ಯಯನವು ಶಕ್ತಿಯನ್ನು
ಕುಂದಿಸುತ್ತದೆ ...

ಪೌಷ್ಟಿಕ ಆಹಾರವು ಅದನ್ನು ಪುನರ್ವ್ಯವಸ್ಥೆ ಗೊಳಿಸುತ್ತದೆ. ಸಾಮಾನ್ಯ ಆಹಾರ ತುಷಾರ್‌ನಲ್ಲಿ ತಯಾರಿಸಿದ್ದಲ್ಲಿ ಬಹಳ ಪುಷ್ಟಿಕರವಾಗುತ್ತದೆ.




# ತುಷಾರ್

ವಿಟಮಿನ್‌ಭರಿತ ವನಸ್ಪತಿಯಾಗಿರುತ್ತದೆ

ತುಂಗಭದ್ರಾ ಇಂಡಸ್ಟ್ರೀಸ್ ಲಿಮಿಟೆಡ್
ಕರ್ನೂಲ್

TI-1/56

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ :: ಮದ್ರಾಸ್-26.

## ಇದೋ! ಯಾರಿಗೂ ಕೊಂಡುಕೊಳ್ಳಲಾಗುವಂತಹ

## ಒಂದು ಟೇಪು ರಿಕಾರ್ಡರ್!




ಎಷ್ಟೋ ದಿನಗಳಿಂದ ನೀವು ಒಂದು **ಗ್ರುನ್‌ಡಿಗ್** ಟೇಪ್ ರಿಕಾರ್ಡರನ್ನು ಕೊಂಡುಕೊಳ್ಳ ಬೇಕೆಂದು ಬಯಸಿದ್ದು ಈಗ ಕೈಗೂಡಿತು. ಯಂತ್ರಗಳನ್ನು ಸುಲಭವಾಗಿ ಹೊಂದಿಸಿ ಇದರ ಬೆಲೆಯನ್ನು ಕಡಮೆ ಮಾಡಿದ್ದೇವೆ. ಆದರೆ ಇದರ ಸುಂದರವಾದ ಆಕಾರವೂ ಉತ್ತಮ ತರಗತಿಯೂ ನಮ್ಮ ಮೇಲ್ತರದ **ಗ್ರುನ್‌ಡಿಗ್** ರಚನೆಯ ನೈಪುಣ್ಯತೆಗೆ ಸ್ವಲ್ಪಕೂಡ ಕೊರತೆಯಿಲ್ಲದಹಾಗೆ ಮಾಡಿರುತ್ತೇವೆ.

**ಬೆಲೆ: ರೂ. 1,050/-**

ಒಂದನ್ನು ಕೊಂಡುಕೊಂಡು ಕುಟುಂಬವೆಲ್ಲಾ ಜೀವಮಾನ
ಪೂರಾ ಸಂತೋಷಪಡುವಹಾಗೆ ಮಾಡಿಕೊಳ್ಳಿ.

ವಿನಿಯೋಗಸ್ಥರು:—

**ಮಹಮುದ್ ಇಬ್ರಹೀಂ & ಕೊ, (ಪ್ರೈವೇಟ್) ಲಿಟ್.,**

7/8, ಮೌಂಟ್ ರೋಡ್, ಮದರಾಸು-2

ಬ್ರಾಂಚುಗಳು: **26/27, ರಟ್ಟನ್ ಬಜಾರ್ ಮದರಾಸು-3**

**113-H. ಬ್ರಿಗೇಡ್ ರೋಡ್, ಬೆಂಗಳೂರು-1**




ರಿಜಿಸ್ಟರ್ಡ್ ನಂ: **119923**

## ಡೈಮಂಡ್ ಸುವಾಸನೆ ಅಡಕೆಪುಡಿ

### ಉಪಯೋಗಿಸುವವರು ಗಮನಿಸಬೇಕು

ನಮ್ಮ 'ಡೈಮಂಡ್' ಮಾರ್ಕ್ ಸುವಾಸನೆ ಅಡಕೆಪುಡಿ ಬಹಳ ರುಚಿಕರವಾದದ್ದು; ಎಲ್ಲಾವಿಧಗಳಲ್ಲೂ ಹೆಚ್ಚು ಪ್ರಸಿದ್ಧಿ ಪಡೆದದ್ದು. ನೀವು ಈಸಾರಿ ಅಡಕೆಪುಡಿ ಕೊಂಡುಕೊಳ್ಳುವಾಗ "ನಮಗೆ 'ಡೈಮಂಡ್' ಮಾರ್ಕ್ ಸುವಾಸನೆ ಅಡಕೆಪುಡಿಯೇ ಬೇಕು. ಅದನ್ನೇ ಕೊಡಿ, ಇತರ ಯಾವುದೂ ಬೇಡ" ಎಂದು ಅಂಗಡಿಯವರೊಡನೆ ಖಂಡಿತವಾಗಿ ಕೇಳಿ.

**ದಿ ಡಿ. ಪಿ. ಅಂಡ್ ಕಂಪೆನಿ,**
**ಕೌಲ್ ಬಜಾರು, ಬಳ್ಳಾರಿ - 1.**

: ಸೇಲ್ಸ್ ಡಿಪೋಗಳು :

**ಚೀರಾಲ - ಗುಂಟೂರು - ಕರ್ನೂಲು - ಆದೋನಿ - ಹುಬ್ಬಳ್ಳಿ**

# ಸೀರೆ
ಮತ್ತು
# ಚಹಾ ಕಪ್...




ಉಣ್ಣೆಯು, ರೇಶ್ಮೆಯು, ರಿಯೋನ್ನಿನ, ಹತ್ತಿಯು ಎಲ್ಲಾ ಬಗೆಯ ಒಗೆಯಲ್ಪಡುವ ಅರಿವೆಗಳಿಗೂ ಹಾಗು ಚೀನೀ ಮಣ್ಣಿನ ಪಾತ್ರೆ, ಪಾಯಿಖಾನೆಯ ಪ್ರೊಕ್ಲೆಯನ್ ಪಾತ್ರೆಗಳಿಗೂ ಮತ್ತು ಮನೆಯ ನೆಲಕ್ಕೂ ಆದರ್ಶವಾದ ಗೋದ್ರೆಜ್ ಸಾಬೂನ್ ಹುಡಿಯನ್ನೇ ಉಪಯೋಗಿಸಿರಿ. ಇದರ ಈ ನವೀನ ಮಿತವ್ಯಯದ ಪದ್ಧತಿಯಿಂದ ಇವೆಲ್ಲವು ಅತಿ ಉತ್ತಮವಾಗಿ ತೊಳೆಯಲ್ಪಡುವವು.

ಅದಲ್ಲದೆ ನಿಮ್ಮ ವಸ್ತ್ರಗಳನ್ನು ಹಾಳುಮಾಡುವ ಯಾ ವಸ್ತ್ರದ ನುಣುಪನ್ನು ನಿರ್ಮೂಲಿಸುವ ಹಾಗೂ ನಿಮ್ಮ ಕೋಮಲ ಕೈ-ಚರ್ಮವನ್ನು ಉರಿಯಿಸುವ ಯಾವ ರೀತಿಯ ಸೋಡಾ ಅಥವಾ ಅಪಾಯಕರ ರಸಾಯನ-ಗಳಾಗಲೀ ಇದರೊಡನೆ ಸೇರಿಲ್ಲ. ಈ ಪುಡಿಯೊಳಗೆ ಸೇರಿಸಿರುವ ಶುಭ್ರಗೊಳಿಸುವ "ಒಪ್ಟಿಕಲ್" ರಸಾಯನವು **ಬಡಿತವಿಲ್ಲದೆ** ನಿಮ್ಮ ಬಿಳಿಯ ಬಟ್ಟೆಗಳನ್ನು ಅಧಿಕ ಬಿಳುಪಾಗಿಯೂ, ಬಣ್ಣದ ಉಡುಪುಗಳನ್ನು ಅಧಿಕ ಬೆಳಗುವಂತೆಯೂ ಮತ್ತು ನುಣುಪುಗೊಳ್ಳುವಂತೆಯೂ ಸಹಾಯವನ್ನೀಯುವದು.

## ಅಗ್ಗ — ಶೀಘ್ರ
## ಉತ್ತಮ

೧-ಪೌಂಡ್, ೩-ಪೌಂಡ್ ಕಾರ್ಟನ್ಸ್.
೫೬-ಪೌಂಡ್‌ಗಳ ಚೀಲಗಳು.

**ಒಂದು ಬಕೆಟ್ ನೀರಿಗೆ ಬರೇ ಐದು ಚಮಚ ಹುಡಿಯನ್ನು ಸೇರಿಸಿರಿ! ಮೆಶೀನುಗಳಿಂದ ಒಗೆಯುವುದಕ್ಕೂ ಕೂಡಾ ಇದು ಆದರ್ಶವಾಗಿದೆ.**

Godrej
ರಿಜಿಸ್ಟರ್ಡ್

# ಗೋದ್ರೆಜ್

## ಒಗೆಯುವ ಸಾಬೂನಿನ ಹರಳುಗಳು

# ಮಾಯಾ ಬಜ಼ಾರ್

## (ಕಥಾ ಸಂಗ್ರಹ)

---

**ಬಾ**ಲ ಶಶಿರೇಖಳ ಹುಟ್ಟಿದಹಬ್ಬಕ್ಕೆ ಸುಭದ್ರೆ, ಬಾಲ ಅಭಿಮನ್ಯು ಬಂದಿದ್ದರು. ಅಭಿಮನ್ಯುವಿನ ಧನುರ್ವಿದ್ಯಾಸಾಹಸವನ್ನು ನೋಡಿ ಬಲರಾಮನು ಮೆಚ್ಚಿದನು. ಶ್ರೀಕೃಷ್ಣನ ಪ್ರೋತ್ಸಾಹದಿಂದ, ಶಶಿರೇಖ ತನ್ನ ಸೊಸೆಯಾಗಬೇಕೆಂದು ಸುಭದ್ರೆ ಕೋರಿದಳು. ಹಾಗೇ ನಡೆಯಿಸುವೆನೆಂದು ಬಲರಾಮ ತಂಗಿಯ ಕೈಯಲ್ಲಿ ಕೈಯಿಟ್ಟು ಮಾತನ್ನು ಕೊಟ್ಟ. ಪಾಂಡವರಂತಹ ಐಶ್ವರ್ಯವಂತರೊಂದಿಗೆ ಸಂಬಂಧ ನಿಶ್ಚಯವಾದ್ದಕ್ಕೆ ರೇವತಿ ಪರಮಾನಂದಭರಿತಳಾದಳು.

ಶಶಿರೇಖ ಅಭಿಮನ್ಯುಗಳುಕೂಡಾ ಯುಕ್ತವಯಸ್ಕರಾದರು.

ಆಗ ಧರ್ಮರಾಜನಿಂದ ದಿಗ್ವಿಜಯವಾಗಿ ರಾಜಸೂಯವನ್ನು ಮಾಡಿಸಿ ಬಂದ ಶ್ರೀಕೃಷ್ಣನು, ಬಲರಾಮನಿಗೆ ಸತ್ಯಪೀಠವನ್ನೂ, ಶಶಿರೇಖೆಗೆ ಪ್ರಿಯದರ್ಶಿನಿಯನ್ನೂ ಕಾಣಿಕೆಯಾಗಿ ಕೊಟ್ಟನು. ಯಾರಿಂದಲಾದರೂ ನಿಜವನ್ನೇ ಹೇಳಿಸುವ ಮಹಿಮೆ ಸತ್ಯಪೀಠದಲ್ಲಿಯೂ, ಯಾರಿಗೆ ಬೇಕಾದ ಪ್ರಿಯವಸ್ತುವನ್ನು ಅವರಿಗೆ ತೋರಿಸುವ ಮಹಿಮೆ ಪ್ರಿಯದರ್ಶಿನಿಯಲ್ಲಿಯೂ ಇದ್ದುವು. ಸರಿ, ಸತ್ಯಪೀಠವನ್ನು ಭದ್ರವಾಗಿಟ್ಟು, ಎಲ್ಲರೂ ಪ್ರಿಯದರ್ಶಿನಿಯ ಮಹಿಮೆ ಎಂತಹುದೋ ಎಂದು ನೋಡಿದರು. ಶಶಿರೇಖೆ ಆ ಪ್ರಿಯದರ್ಶಿನಿಯನ್ನು ತೆರೆದೊಡನೆಯೇ ಪ್ರೇಮಗೀತೆಯೊಂದಿಗೆ ಅಭಿಮನ್ಯು ಕಾಣಬಂದ. ರೇವತಿಗೆ ಧನರಾಶಿಗಳು ಕಂಡುಬಂದುವು. ಬಲರಾಮನಿಗೆ ದುರ್ಯೋಧನನು ಕಂಡುಬಂದ. ಶ್ರೀಕೃಷ್ಣನಿಗೆ ದಾಳಗಳನ್ನು ಎಸೆಯುತ್ತಾ ಶಕುನಿ

ಪ್ರತ್ಯಕ್ಷನಾದ. ಆ ದುಷ್ಟನು ಯಾವ ಕಪಟನಾಟಕವನ್ನಾಡುತ್ತಾನೋ ಎಂದು ಶ್ರೀಕೃಷ್ಣ ಭಯಪಟ್ಟ.

ಮಾಯಾದ್ಯೂತವಿಶಾರದನಾದ ಶಕುನಿ, ಪಾಂಡವರನ್ನು ಮೋಸಗಿಸಿ ಅವರ ಸಕಲ ರಾಜ್ಯವನ್ನು, ಅವರ ಸಮಸ್ತ ಐಶ್ವರ್ಯವನ್ನು ಕಿತ್ತುಕೊಡುವೆನೆಂದು ಶಪಥಮಾಡಿ, ದುರ್ಯೋಧನನು ಧರ್ಮರಾಜನನ್ನು ಜೂಜಿಗೆ ಕರೆಯಿಸುವ ಏರ್ಪಾಡು ಮಾಡಿದನು.

ದ್ವಾರಕೆಯಲ್ಲಿ ಯಾದವ ಪ್ರಮುಖರೆಲ್ಲರೂ ನೃತ್ಯವಿನೋದದಲ್ಲಿರುವಾಗ್ಗೆ, ದ್ರೌಪದಿಯ ಆರ್ತನಾದವನ್ನು ಕೇಳಿ ಶ್ರೀಕೃಷ್ಣನು ಅವಳಿಗೆ ಅಭಯವನ್ನಿತ್ತು, ಪಾಂಡವರ ರಾಜ್ಯ ಸರ್ವೈಶ್ವರ್ಯವನ್ನೂ ದೋಚಿಕೊಂಡು, ದುರ್ಯೋಧನನು, ಅವರನ್ನು ಅಡವಿಗಟ್ಟಿದ್ದಾನೆಂದು ಹೇಳಿದ. ಸಾತ್ಯಕಿ ಪ್ರಮುಖರು ಕೌರವರ ಮೇಲೆ ಯುದ್ಧಸನ್ನದ್ಧರಾಗಲು ಅವರನ್ನು ಸಮಾಧಾನಗೊಳಿಸಿ, ತಾನು ದುರ್ಯೋಧನನಿಗೆ ಬುದ್ಧಿ ಹೇಳಿ, ಪಾಂಡವರ ರಾಜ್ಯವನ್ನು ಹಿಂತಿರುಗಿ ಕೊಡಿಸಿ ಬರುತ್ತೇನೆಂದು, ಬಲರಾಮ ಹಸ್ತಿನಾಪುರಕ್ಕೆ ಹೊರಟ.

ಆದರೆ ಹೊರಟ ಕೆಲಸ ಒಂದು, ಮಾಡಿಕೊಂಡು ಬಂದದ್ದೊಂದು ಎಂದಂತೆ, ಬಲರಾಮನು ದುಷ್ಟಚತುಷ್ಟಯಗಳು ಮಾಡಿದ ಮಿತಿಯಿಲ್ಲದ ಸನ್ಮಾನಕ್ಕೂ ಮುಖಸ್ತುತಿಗೂ ಉಬ್ಬಿಹೋಗಿ, ಅವರ ಕಾಗೆ ಗುಬ್ಬಿ ಕಥೆಗಳನ್ನು ನಂಬಿ ಕೌರವರು ಧರ್ಮಹೃದಯರು; ಪಾಂಡವರೇ ದುರಾತ್ಮರೆಂದು ನಿರ್ಣಯಿಸವುದೇ ಅಲ್ಲದೆ ಶಶಿರೇಖೆಯನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆಮಾಡುತ್ತೇನೆಂದು ದುರ್ಯೋಧನನಿಗೆ ಮಾತುಕೊಟ್ಟು ಬಂದ.

ಶ್ರೀಕೃಷ್ಣನು ಸುಭದ್ರೆಯನ್ನೂ ಅಭಿಮನ್ಯುವನ್ನೂ ದ್ವಾರಕೆಗೆ ಕರೆತಂದ. ರಾಜ್ಯಭ್ರಷ್ಟರಾಗಿ ಬಂದ ಇವರಮೇಲೆ ರೇವತಿಗಿದ್ದ ಮೋಹ ಹೋಯಿತು.

ಅನ್ಯೋನ್ಯಾನುರಾಗಭರಿತರಾದ ಶಶಿರೇಖೆ ಅಭಿಮನ್ಯುಗಳು ಹುಣ್ಣಿಮೆಯ ರಾತ್ರಿ ಜಲವಿಹಾರ ಏರ್ಪಾಟು ಮಾಡಿಕೊಂಡರು. ಬಲರಾಮ ಬಂದು ಶಶಿರೇಖೆಯನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆಮಾಡುವೆನೆಂದು ಮಾತುಕೊಟ್ಟು ಬಂದಿದ್ದೇನೆಂದು ಹೇಳಿದೊಡನೆಯೇ ರೇವತಿ ಬ್ರಹ್ಮಾನಂದದಿಂದ, ನಿರಾಶಳಾದ ಶಶಿರೇಖೆಯನ್ನು ಮಹಡಿಮೇಲೆ ನಿರ್ಬಂಧದಲ್ಲಿಟ್ಟಳು. ಆದರೆ ಹುಣ್ಣಿಮೆರಾತ್ರಿಯಾದೊಡನೆ ಅಭಿಮನ್ಯು ಬಂದು, ಬಾಣಗಳಿಂದ ಏಣಿಯನ್ನು ಕಟ್ಟಿ ಶಶಿರೇಖೆಯನ್ನು ಕೆಳಗಿಳಿಸಿಕೊಂಡು, ಇಬ್ಬರೂ ರಹಸ್ಯವಾಗಿ ಜಲವಿಹಾರಕ್ಕೆ ಹೊರಟರು. ಭಟರು ಬಂದು ಈ ವಿಚಾರ ವನ್ನು ಹೇಳಿದೊಡನೆಯೇ ಬಲರಾಮನೂ ರೇವತಿಯೂ ಕೋಪಗೊಂಡು ನದಿಯ ತೀರಕ್ಕೆ ಹೊರಟರು. ಈ ವಿಚಾರ ತಿಳಿದು ಶ್ರೀಕೃಷ್ಣನೂ ರುಕ್ಮಿಣಿಯೂ ಅವರಿ ಗಿಂತ ಮುಂಚೆಯೇ ಹೊರಟು ಶಶಿರೇಖೆ ಅಭಿಮನ್ಯುಗಳನ್ನು ರಹಸ್ಯವಾಗಿ ಕಳಿಸಿ ಕೊಟ್ಟು, ರೇವತಿ ಬಲರಾಮರು ಬರುವಹೊತ್ತಿಗೆ ನಾವೆಯಿಂದ ತಾವೇ ಇಳಿ ದರು. ಇವರನ್ನು ನೋಡಿ ಭಟರು ತಪ್ಪೆಣಿಸಿರಬೇಕೆಂದು ರೇವತಿ ಬಲರಾಮರು ಶಾಂತರಾಗಿ....ಆ ವಾತಾವರಣವನ್ನು ಮೆಚ್ಚಿಕೊಂಡು ತಾವೂ ಕೊಂಚ ಜಲ ವಿಹಾರಮಾಡಿ ಹೊರಟರು.

ಲಗ್ನ ನಿಶ್ಚಯ ಮಾಡಿಕೊಂಡು, ಶಕುನಿ ದ್ವಾರಕೆಗೆ ಬಂದ. ಅವರು ನಿಶ್ಚ ಯಿಸಿರುವ ಲಗ್ನ ವರನಿಗೆ ಸರಿಕೂಡುವುದಿಲ್ಲವೆಂದು ಬಲರಾಮನ ಪುರೋಹಿತರು ಹೇಳಿದರೂ, ಶಕುನಿಯೊಂದಿಗೆ ಶ್ರೀಕೃಷ್ಣನುಕೂಡಾ ಈ ಮದುವಗೆ ಈ ಲಗ್ನವೇ ಸರಿ ಯೆಂದ. ಸಂತೋಷಗೊಂಡ ಬಲರಾಮನು ಆ ಲಗ್ನಕ್ಕೆ ಮದುವೆಯನ್ನು ನಿಶ್ಚಯಿಸಿದ.

ಈ ವಿಚಾರ ತಿಳಿದು, ಸುಭದ್ರೆ ಕೋಪ ಮತ್ತು ದುಃಖಗೊಂಡು ಬಂದು, ನನಗೆ ಕೊಟ್ಟ ಮಾತನ್ನು ತಪ್ಪುವೆಯಾ ಅಣ್ಣಾ ಎಂದು ಬಲರಾಮನನ್ನು ಕೇಳಿದಳು. ಇದು ನಾನು ದುರ್ಯೋಧನ ಚಕ್ರವರ್ತಿಗೆ ತುಂಬು ಸಭೆಯಲ್ಲಿ ಕೊಟ್ಟ ವರ, ಈ

ಮದುವೆಯನ್ನು ನಡೆಯಿಸಿಯೇ ತೀರುವೆನೆಂದು ಅಂದ ಬಲರಾಮ. "ಆದರೆ ನೀನು ಶೌರ್ಯ ಪ್ರತಾಪಗಳಿಗಿಂತ ಐಶ್ವರ್ಯವೇ ಶಾಶ್ವತವೆನ್ನುವೆಯಾ" ಎಂದಳು ಸುಭದ್ರೆ. "ಶೌರ್ಯ ಪ್ರತಾಪಗಳ ಹೆಸರು ಹೇಳಿ ನನ್ನನ್ನು ಬೆದರಿಸುವೆಯಾ? ಸಹಸ್ರಮಂದಿ ಅರ್ಜುನರೂ ಭೀಮರೂಕೂಡಾ ಒಬ್ಬ ದುರ್ಯೋಧನನ ಕಾಲಿನುಗುರಿಗೆ ಸರಿಹೊಂದ ಲಾರ"ರೆಂದು ಬಲರಾಮನೆಂದ. ಆ ಮಾತನ್ನು ಕೇಳಿ ಅಭಿಮನ್ಯು ಕೋಪಗೊಂಡು "ನಿರ್ಭಯವಾಗಿ ಸ್ವಯಂವರವನ್ನು ಏರ್ಪಾಡು ಮಾಡಿ; ಆ ಕೌರವರೆಲ್ಲರನ್ನು ಚೆಂಡಾಡಿ ಶಶಿರೇಖೆಯನ್ನು ನಾನು ದಕ್ಕಿಸಿಕೊಳ್ಳುವೆ" ನೆಂದು ಅಂದನು. ಆಗ ಕೃಷ್ಣನು ಚಮತ್ಕಾರವಾಗಿ ಸುಭದ್ರೆಯನ್ನು ಅಭಿಮನ್ಯುವನ್ನು ಮೂದಲಿಸುವಂತೆ ಮಾಡಿ ಕರ್ತವ್ಯವನ್ನು ಉಪದೇಶಿಸಿ, ನಿಮಗೆ ದಿಕ್ಕಿರುವಲ್ಲಿಗೆ ಹೋಗೆಂದನು. ಅವರು ದ್ವೈತ ವನಕ್ಕೆ ಹೊರಡಲು, ಶ್ರೀಕೃಷ್ಣನು ರಹಸ್ಯವಾಗಿ ಅವರನ್ನು ಘಟೋತ್ಕಜನ ಆಶ್ರಮ ಸೇರಿಸೆಂದು ದಾರುಕನಿಗೆ ಹೇಳಿದನು.

ಘಟೋತ್ಕಜನು ತನ್ನ ಅನುಚರರೊಂದಿಗೆ ವೀರವಿದ್ಯಾ ಪರೀಕ್ಷೆಯಲ್ಲಿದ್ದ. ಆಗ ಅಲ್ಲಿದ್ದ ಭೂಮಿ ದುಂದುಭಿ ಮೂಲಕವಾಗಿ, ಅಭಿಮನ್ಯುವಿನ ರಥವು ತನ್ನ ಅರಣ್ಯದೊಳಗೆ ಬರುವುದನ್ನು ನೋಡಿ ಘಟೋತ್ಕಜನು ಆ ವೀರನಾರೋ ಸೋಲಿಸಿ ಬನ್ನಿರೆಂದು ತನ್ನ ಅನುಚರರನ್ನು ಕಳಿಸಿದ. ಅಭಿಮನ್ಯು ಆ ಮಾಯ ರಾಕ್ಷಸ ರೆಲ್ಲರನ್ನೂ ಸುನಾಯಾಸವಾಗಿ ಜಯಿಸುವುದನ್ನು ನೋಡಿ ಘಟೋತ್ಕಜನು ಸ್ವತಃ ತಾನೇ ಬಂದು ಅಭಿಮನ್ಯುವಿನ ಮುಂದೆ ನಿಂತನು. ಉಭಯರಿಗೂ ಭಯಂ ಕರವಾದ ಅಸ್ತ್ರಯುದ್ಧ ಜರುಗಿತು. ಕಡೆಗೆ ಘಟೋತ್ಕಜನು ಪ್ರಯೋಗಿಸಿದ ಒಂದು ಶಕ್ತಿಯ ಮಾಯೆಯನ್ನು ತಿಳಿಯಲಾರದೇ ಅದರ ಏಟಿಗೆ ಅಭಿಮನ್ಯು ಮೂರ್ಛೆ ಹೋದ. ಆಗ ಸುಭದ್ರೆ ಧನುರ್ಬಾಣಗಳನ್ನು ಧರಿಸಿ ಕೃಷ್ಣಾರ್ಜುನರ ಹೆಸರು ಗಳನ್ನು ಸ್ಮರಿಸಿ ಬಾಣ ಬಿಡುವುದರಲ್ಲಿರುವಾಗ, ಆ ಹೆಸರುಗಳನ್ನು ಕೇಳಿ ಬಾಂಧವ್ಯ ವನ್ನರಿತು ಶರಣು ತಾಯಿಯೆಂದು ಘಟೋತ್ಕಜನು ಅವಳ ಕಾಲುಗಳಿಗೆ ಬಿದ್ದು

ತನ್ನ ತಪ್ಪನ್ನು ಕ್ಷಮಿಸೆಂದ. ಅಭಿಮನ್ಯು ಎಚ್ಚೆತ್ತನಂತರ, ಸಹೋದರರು ಒಬ್ಬರನ್ನೊಬ್ಬರು ಆಲಿಂಗನ ಮಾಡಿಕೊಂಡರು. ಹಿಡಿಂಬೆ ಕೂಡಾ ಬಂದು ಸುಭದ್ರೆ ಅಭಿಮನ್ಯುಗಳನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋಗಿ ಹಬ್ಬ ಮಾಡಿ ಬಹಳವಾಗಿ ಆದರಿಸಿದಳು.

ನಂತರ ವಿಚಾರವನ್ನೆಲ್ಲಾ ಸುಭದ್ರೆಯಿಂದ ತಿಳಿದು, "ಶಶಿರೇಖೆಯನ್ನು ಮಾಯೆಯಿಂದ ಕರೆದು ತಾ, ಅಭಿಮನ್ಯುವಿಗೆ ಕೊಟ್ಟು ನಮ್ಮ ಆಶ್ರಮದಲ್ಲಿಯೇ ವಿವಾಹ ಮಾಡೋಣ" ಎಂದು ಹೇಳಿ ಹಿಡಿಂಬೆ ಘಟೋತ್ಕಜನನ್ನು ದ್ವಾರಕೆಗೆ ಕಳಿಸಿದಳು.

ಒಂದು ದಿನ ರಾತ್ರಿ ದ್ವಾರಕೆಗೆ ಬಂದು ಘಟೋತ್ಕಜನು ಎಲ್ಲರನ್ನೂ ಮಾಯಾಬದ್ಧರನ್ನಾಗಿ ಮಾಡುತ್ತಿರಲು, ಶ್ರೀಕೃಷ್ಣನು ಒಬ್ಬ ವೃದ್ಧನ ರೂಪದಲ್ಲಿ ಅವನಿಗೆ ಕಂಡುಬಂದು, ತನ್ನ ಮಾಯೆಗೆ ಅವನು ಒಳಪಡಲಾರನೆಂದು ಅನಿಸಿ, ಕಡೆಗೆ ಬುದ್ಧಿ ಬಂದು ಘಟೋತ್ಕಜನು ತನ್ನನ್ನೇ ಸ್ಮರಿಸಲು, ನಿಜರೂಪವನ್ನು ತೋರಿಸಿ ಘಟೋತ್ಕಜನು ಅಲ್ಲಿ ಮಾಡಬೇಕಾದ ಕೆಲಸಗಳನ್ನೆಲ್ಲಾ ಅವನಿಗೆ ಹೇಳಿಕೊಟ್ಟನು.

ಆನಂತರ, ನಿದ್ರಿಸುತ್ತಿದ್ದ ಶಶಿರೇಖೆಯನ್ನು ಮಾಯಾಬಲದಿಂದ ಘಟೋತ್ಕಜನು ತನ್ನ ಆಶ್ರಮಕ್ಕೆ ತೆಗೆದುಕೊಂಡು ಹೋಗಿ ಸುಭದ್ರೆಗೂ, ಹಿಡಿಂಬೆಗೂ ಒಪ್ಪಿಸಿ, ಸರಿಯಾಗಿ ಆ ಲಗ್ನಕ್ಕೇ ಶಶಿರೇಖ ಅಭಿಮನ್ಯುಗಳಿಗೆ ವಿವಾಹಮಾಡಿರೆಂದು ಹೇಳಿ, ತಾನು ಮಾಯಾ ಶಶಿರೇಖೆಯಾಗಿ ದ್ವಾರಕೆಗೆ ಬಂದು ಪ್ರವೇಶಿಸಿದ. ಮಾಯಾ ಶಶಿರೇಖೆಯನ್ನು ಮದುವೆಯ ಹೆಣ್ಣಾಗಿ ಮಾಡಿದರು. ಲಕ್ಷ್ಮಣನನ್ನು ಕರೆದುಕೊಂಡು ದುರ್ಯೋಧನನು ಮದುವೆಗೆ ಬಂದ. ಘಟೋತ್ಕಜನ ರಾಕ್ಷಸರೆಲ್ಲರೂ ಮದುವೆಯ ಮನೆಯವರಂತೆ, "ಮಾಯಾಬಜಾರ"ನಲ್ಲಿ, ಮದುವೆಗೆ ಬಂದಿದ್ದವರಿಗೆಲ್ಲ ಮಾಯಾ

ಕಿರೀಟಗಳನ್ನು, ಮಾಯಾಹಾರಗಳನ್ನೂ ಬಹುಮಾನನಾಗಿ ಕೊಟ್ಟರು. ಮೊದಲು ಮದುವೆಯ ಹೆಣ್ಣನ್ನು ತೋರಿಸದೆ ಮದುವೆಯಾಗಲಾರೆನೆಂದು ಲಕ್ಷ್ಮಣನು ಪಟ್ಟು ಹಿಡಿದಿದ್ದರಿಂದ, ಘಟೋತ್ಕಜನು ಮಾಯಾ ಶಶಿಯಾಗಿ ಬಿಡದಿಗೆ ಹೋಗಿ, ಭಾನುಮತಿ ರಾಣಿ, ಶಕುನಿ ಮತ್ತು ಲಕ್ಷ್ಮಣ ಕುಮಾರರನ್ನು ಕೋತಿ ಚೇಷ್ಟೆಗಳಿಂದ ಬೆದರಿಸಿ ಅಲ್ಲಿ ಬೀಗರಿಗೆ ಮಾಡಿದ್ದ ತಿಂಡಿಪದಾರ್ಥಗಳನ್ನೆಲ್ಲ ರಹಸ್ಯವಾಗಿ ತಿಂದು ಹಾಕಿ ಹೊರಟುಹೋದ.

ಮದುವೆಗೆ ಬಂದವರಲ್ಲಿ ಲಕ್ಷ್ಮಣನ ಸಾರಥಿ, ದುರ್ಯೋಧನನ ಪುರೋಹಿತರು ತಮಗೆ ಕಂಬಳಿಯಲ್ಲ ಗಿಂಬಳಿಗಳು ಬೇಕೆಂದೂ, ತಲ್ಪಗಳಲ್ಲ ಗಿಲ್ಪಗಳು ಬೇಕೆಂತಲೂ ಮದುವೆ ಮನೆಯವರಂತಿದ್ದ ರಾಕ್ಷಸರನ್ನು ಗೋಳಿಟ್ಟರು. ಅವರು ರಾಕ್ಷಸಮಾಯೆ ಯಿಂದ ನಿರ್ಮಿಸಿಕೊಟ್ಟ ಆ ಗಿಂಬಳಿ ಗಿಲ್ಪಗಳಿಂದ ರಾತ್ರಿಯೆಲ್ಲಾ ನಾನಾ ಬಾಧೆ ಗಳನ್ನನ್ನುಭವಿಸಿ ಉಸಿರಿಲ್ಲದೆ ಮದುವೆಗೆ ಹಾಜರಾದರು.

ಇನ್ನು ಹಸೆಯ ಮಣೆಯಮೇಲೆ ಕುಳಿತಾಗಿನಿಂದ ಲಕ್ಷ್ಮಣ ಕುಮಾರನು ಬೇಸತ್ತಿದ್ದ. ಮಧ್ಯೆಯಿದ್ದ ತೆರೆಯನ್ನು ತೆಗೆದು ಹಾಕೆಂದ. ಕಾಲನ್ನು ಮೆಟ್ಟಿ ದಾಗ, ಪಾಣಿಗ್ರಹಣ ಮಾಡಿದಾಗ, ಮದುವೆಯ ಹೆಣ್ಣಿಗೆ ತನ್ನ ಪ್ರತಾಪವನ್ನು ತೋರಿಸಲು ಗಟ್ಟಿಯಾಗಿ ಅದುಮಿದ. ಮಾಯಾಶಶಿ ಅದಕ್ಕಿಂತ ಜೋರಾಗಿ ಅದು ಮಿದ್ದರಿಂದ ಕಿಟಕಿಟಲಾಡಿದ. ಜೀರಿಗೆ ಬೆಲ್ಲವನ್ನು ತಲೆಯಮೇಲೆ ಹಾಕಿದಾಗ ಶಶಿರೇಖೆ ಕೋತಿಯಾಗಿ ಕಂಡು ಬಂದು ಲಕ್ಷ್ಮಣ ಹೆದರಿಹೋದ. ಶಕುನಿ ದುರ್ಯೋಧನರು ಧೈರ್ಯಹೇಳಿ ಪರವಾಗಿಲ್ಲ ತಾಳಿಕಟ್ಟೆಂದರು. ತಾಳಿಯನ್ನು ಕಟ್ಟಬರಲು ಶಶಿರೇಖೆ ದೊಡ್ಡ ಹುಲಿಯಂತೆ ಮತ್ತು ಭೂತವಾಗಿ ಕಂಡು ಬಂದು ಲಕ್ಷ್ಮಣ ಮೂರ್ಛೆಹೋದ. ಈ ಗಲಾಟೆ ಮದುವಣಿಗನನ್ನು ನೋಡಿ ಬಲರಾಮ ನಿಗೆ ಕೋಪ ಬಂತು. "ನಾವೆಲ್ಲರೂ ಒಳ್ಳೆಯವರೇ. ಇದು ನಿನ್ನ ಮಗಳಲ್ಲ,

ಮಾಯಶಶಿರೇಖೆ ರಾಕ್ಷಸಿ. ಇದೆಲ್ಲಾ ಶ್ರೀಕೃಷ್ಣನ ಮೋಸ" ಎಂದು ಶಕುನಿ ನಿಂದಿಸಿದ. ಯಾರ ಮೋಸವೋ ತಿಳಿಯುತ್ತೆ. ಈ ಪೀಠದಮೇಲೆ ನಿಂತು ಮಾತನಾಡೆಂದು ಸಾತ್ಯಕಿ ಸತ್ಯ ಪೀಠವನ್ನು ತೋರಿಸಿದ. ದುರ್ಯೋಧನನು ಬೇಡವೆಂದರೂ ಕೇಳದೆ ಶಕುನಿ ಆ ಪೀಠದಮೇಲೆ ನಿಂತ. ನೋಡಿ ಅದರ ಮಹಿಮೆ. "ಮಾಯೆಯಿಂದ ಪಾಂಡವರ ರಾಜ್ಯವನ್ನು ಕಿತ್ತುಕೊಂಡೆವು. ನೀನು ನಮ್ಮ ಅಂತಸ್ತಿನವನಲ್ಲವಾದರೂ, ಪಾಂಡವರಿಗೆಂದಿಗೂ ನಿನ್ನ ಮತ್ತು ನಿನ್ನ ತಮ್ಮನ ಸಹಾಯ ಸಿಗದಿರಲೆಂದು ನಿನ್ನ ಸಂಬಂಧವನ್ನು ಒಪ್ಪಿಕೊಂಡೆವು. ನೀನೊಬ್ಬ ಆಲೋಚನಾ ಹೀನನಾದ ಗೊಲ್ಲ. ನನ್ನ ಮಾಯೆಯಲ್ಲಿ ಬಿದ್ದೆ" ಯೆಂದು ಶಕುನಿ ನಿಜವನ್ನು ಹೇಳಿಬಿಟ್ಟ. ಈ ಮೋಸ ತಿಳಿದು ಬಂದೊಡನೆಯೇ ಬಲರಾಮನು ಕೋಪಗೊಂಡನು. ಆಗ ಘಟೋತ್ಕಜನು, ಅವನ ಅನುಚರರು, ನಿಜರೂಪಗಳನ್ನು ಧರಿಸಿ ಕೌರವರನ್ನು ನಾನಾವಿಧವಾಗಿ ಹಿಂಸಿಸಿದರು. ಅವರ ಕಿರೀಟಗಳೆಲ್ಲ ಬೆಂಕಿಕುಂಡಗಳಾದುವು. ಹಾರಗಳೆಲ್ಲ ಹಾವುಗಳಾದುವು. ಆರ್ತನಾದಗಳನ್ನು ಮಾಡುತ್ತಿದ್ದ ಆ ದುಷ್ಟಚತುಷ್ಟಯಗಳಿಗೆ ಬುದ್ಧಿ ಹೇಳಿ ಘಟೋತ್ಕಜನು ಅವರನ್ನು ಮೂಟೆಕಟ್ಟಿ ಹಸ್ತಿನಾಪುರದಲ್ಲಿ ಬಿಸಾಡಿಸಿದ.

ಕಡೆಗೆ ಘಟೋತ್ಕಜನು ಮಾಡಿದ ಕೆಲಸಕ್ಕೆ ಸಂತೋಷಗೊಂಡು ಬಲರಾಮ, ರೇವತಿ, ಕೃಷ್ಣ, ರುಕ್ಮಿಣಿ ಎಲ್ಲರೂ ಅವನ ಆಶ್ರಮಕ್ಕೆ ಹೋಗಿ ಶಶಿರೇಖ ಅಭಿಮನ್ಯುಗಳನ್ನು ಆಶೀರ್ವದಿಸಿದರು. ಇದೆಲ್ಲ ನನ್ನ ಸುಪುತ್ರನು ಮಾಡಿದ ಘನಕಾರ್ಯವೆಂದು ಹಿಡಿಂಬೆ ಸಂತೋಷಪಟ್ಟರೆ, ಇಲ್ಲ ಇದೆಲ್ಲ ಶ್ರೀಕೃಷ್ಣನ ದಿವ್ಯಲೀಲೆ ಎಂದು ಘಟೋತ್ಕಜನು ಸ್ತೋತ್ರ ಮಾಡಲು ಶ್ರೀಕೃಷ್ಣಪರಮಾತ್ಮನು ಎಲ್ಲರಿಗೂ ವಿಷ್ಣುರೂಪ ದರ್ಶನ ಕೊಟ್ಟನು. ಮಂಗಳ.

"VIJAYA"



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

ಪರೋಪಕಾರಕ್ಕಾಗಿಯೇ ಈ ಶರೀರವಿರುವುದೆಂದು ಹಿರಿಯರು ಹೇಳುತ್ತಾರೆ. ತನ್ನ ಹಿತಕ್ಕಾಗಿಯೇ ಈ ಶರೀರವನ್ನು ಉಪಯೋಗಿಸುವುದರಲ್ಲಿ ಯಾವುದೊಂದು ವಿಶೇಷವೂ ಇಲ್ಲ. ಅದರಲ್ಲೂ ಮನುಷ್ಯರು ತನ್ನ ಹಿತಕ್ಕಾಗಿ ಇತರ ಪ್ರಾಣಿಗಳ ಹಿಂಸೆಯನ್ನು ಮಾಡುವುದು ಇನ್ನಷ್ಟು ಹೀನವೆನಿಸುತ್ತದೆ. ಇದಕ್ಕಿಂತಲೂ ಪ್ರತ್ಯುಪಕಾರ ಮಾಡುವುದರಲ್ಲಿಯೇ ಮನುಷ್ಯತ್ವದ ವಿಶೇಷವು ನಿಂತಿದೆ. ಪ್ರಪಂಚದಲ್ಲಿ ಬಡವರಿಗೆ ಧನಿಕರಿಂದಲೂ ಧನಿಕರಿಗೆ ಬಡವರಿಂದಲೂ ಏನೋ ಒಂದು ವಿಧವಾಗಿ ಸಹಾಯಗಳಾಗುತ್ತಲೇ ಇರುತ್ತದೆ. ಇದನ್ನು ಮರೆಯದೆ ಪ್ರತ್ಯುಪಕಾರ ಮಾಡಬೇಕೆಂಬ ಬುದ್ಧಿಯುಳ್ಳವರು ಉದಾರಿಗಳು ಮತ್ತು ಸುಹೃದಯರು. ಮಾನವರು ಇನ್ನೊಬ್ಬರಿಗೆ ಉಪಕಾರ ಮಾಡುತ್ತಾ ಇರಬೇಕು, ಆದರೆ ಪ್ರತ್ಯುಪಕಾರ ಪಡೆಯುವ ಅಪೇಕ್ಷೆ ಯಾರಿಗೂ ಇರಬಾರದು. ಈ ಬಗೆಯಾಗಿ ಹೊಂದಿಕೊಳ್ಳುವ ಜನರಿಂದ ಒಸರುವ ಗುಣವಾಹಿನಿ ಅಮೃತದಂತಿರುತ್ತದೆ. ಇಂತಹ ಅಮೃತಮಯ ನೀತಿಯ ಒರತೆಯಾಗಿದೆ 'ಉತ್ತಮ ಪಾತ್ರ'ವೆಂಬ ಈ ಸಂಚಿಕೆಯಲ್ಲಿರುವ ಜಾತಕಕಥೆ. ಈ ಕಥೆಯಲ್ಲಿ ಬರುವ ಮುಖ್ಯಪಾತ್ರಗಳು ಉತ್ತಮ ಗುಣಕ್ಕೆ ನಿದರ್ಶನಗಳಾಗಿವೆ. ರಾಜನ ಕೃತಜ್ಞತೆಗೂ ಬಡವನ ನಿಃಸ್ವಾರ್ಥತೆಗೂ ಇದೊಂದು ಒಳ್ಳೆಯ ಉದಾಹರಣೆ. ಆಪತ್ಸಹಾಯ, ಅತಿಥಿಸತ್ಕಾರ, ಕೃತಜ್ಞತೆ, ಲೋಕರೂಢಿ ಮೊದಲಾದ ಒಳ್ಳೆಯ ಗುಣಗಳೇ ತುಂಬಿದ ಸುಂದರ ಸಮುಚ್ಚಯವಿದು—"ಉತ್ತಮ ಪಾತ್ರ".

ಸಂಚಿಕೆ ೪

ಏಪ್ರಿಲ್ ೧೯೫೨

ಸಂಪುಟ ೧೮

# ಯುಗಾದಿಯ ಕರೆ

**ಸಂ**ದವರ್ಷ ವದು ಹಿಂದೆ ಇದೆ,
ಬಂದ ವರ್ಷ ಕಣ್ಮುಂದೆ ಇದೆ;
ಹಿಂದಿನ ಅನುಭವ ನೆನಪು ಇದೆ;
ಮುಂದಿನ ಅನುಭವ ಕರೆಯುತಿದೆ.

"ಬನ್ನಿರಿ! ಬನ್ನಿರಿ! ಓ! ಓ! ಗೆಳೆಯರೆ!
ಯುಗಾದಿ ಹಬ್ಬದ ಅತಿಥಿಗಳೇ!
ನಡೆದು ದಣಿದಿರಾ? ಹಬ್ಬ ಮಾಡಿರೋ!
ಬಳಲಿಕೆ ನೀಗಿರಿ, ಸುದಿನದಲೇ!

ಅಣ್ಣರೆ! ಚಿಣ್ಣರೆ! ಅಮ್ಮಕ್ಕಂದಿರೆ!
ಹಣ್ಣು ಹಂಪಲವ ಸಿದೆಕೊಳ್ಳೀ!
ತಣ್ಣಗೆ ನಡೆಯಿರಿ ಸನ್ನುತಮಾರ್ಗದಿ,
ಹೊಸ ವರ್ಷದ ನಡೆ - ಕೈಗೊಳ್ಳೀ!

ಎಲ್ಲರ ನಲಿಸಲು ಕಾದಿಹುದಿಲ್ಲೇ
ವಸಂತ ತೋಟವು - ಕಾಣುತಿದೆ!
ಮುಂದಿನ್ನೂ ಇವೆ ಹೊಸಬಗೆ ಗುಣಗಳ
ಉತ್ತಮ ಋತುಗಳು;—ಹಾದಿ ಇದೇ!"

ನಿಜ, ವಸಂತ ಚೆಲು, ಗ್ರೀಷ್ಮದ ಗಾಳಿ,
ಶರತ್ ಪ್ರಕಾಶ, ವರ್ಷಣ ಭಾರಿ,
ಹೇಮಂತದ ಹನಿ, ಶಿಶಿರದ ಚಳಿಚಳಿ!
ಆಹ! ಕಾಲದೇವನ ಹೆದ್ದಾರಿ!

ಬೇವು ಬೆಲ್ಲಗಳ ಕಹಿ ಸವಿಯುತಲಿ,
ಹೊಸ ಉತ್ಸಾಹದ ಉಡುಗೆಯಲಿ,
ಗುರು ಹಿರಿಯರ ಅಡಿಗೆರಗುತಲಿ
ಅಡಿಯಿಡೋಣ, ಉತ್ಸಾಹದಲಿ!

—"ಸುಂದರಿ"

# ಶುಭ ಸಂದೇಶ

"ಕಂದಾ, ಮಗೂ, ಏಳಮ್ಮಾ, ಎದ್ದು ಮೊದಲು ಫಲದೇವರನ್ನು ನೋಡಿ! ನಮಸ್ಕಾರ ಮಾಡಿ!" ಎಂದು ಬೆಳಗುಮುಂಜಾನೆ ತಾಯಿ ಮಕ್ಕಳನ್ನು ಎಬ್ಬಿಸುತ್ತಾಳೆ. ಹೀಗೆ ಉದಯವಾಗುತ್ತೆ ಯುಗಾದಿ ಹಬ್ಬ.

ಪ್ರತಿವರ್ಷವೂ ಸಂವತ್ಸರದ ಪ್ರಾರಂಭ ದಿನವೇ ಯುಗಾದಿ ಹಬ್ಬ. ಇದನ್ನೇಕೆ 'ಯುಗಾದಿ' ಎನ್ನುತ್ತಾರೆ? ಯುಗಗಳು ಎಂದರೆ ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಮಹಾಯುಗಗಳು. ಇದು ಎಲ್ಲರಿಗೂ ಗೊತ್ತು. ಹಾಗಾದರೆ ಪ್ರತಿವರ್ಷವೂ ಮೊದಲನೇ ದಿನ ಯುಗಾದಿ ಹೇಗಾಗುತ್ತೆ? ನೋಡೋಣ.

ಒಂದೊಂದು ಮಹಾಯುಗ ಮುಗಿಯುವ 'ಯುಗಾದಿ'ಯವರೆಗೆ ನಮ್ಮಿಂದ ಬದುಕಿರಲು ಸಾಧ್ಯವೆ? ನಮಗೆ ಒಂದು ವರ್ಷವೇ ಒಂದು ಮಹಾಯುಗದ ಹಾಗಿದೆ. ಒಂದೊಂದು ವರ್ಷವೂ ಆರಾರು ಋತುಗಳನ್ನು ಧರಿಸಿಕೊಂಡಿದೆ. ಪ್ರತಿ ವರ್ಷವೂ ಈ ಆರು ಋತುಗಳದೇ ಪುನರಾವರ್ತನೆ. ಆದುದರಿಂದ ಈ ಆರು ಋತುಗಳನ್ನು ಹೊಂದಿಕೊಂಡೇ ನಮ್ಮ ಜೀವನ ಸಾಗುತ್ತಿದೆ. ಈಗ ಹೇಳಿ, ಪ್ರತಿವರ್ಷವೂ ನಮಗೆ ಪ್ರತ್ಯಕ್ಷ ಯುಗಾದಿಯಲ್ಲದೆ ಮತ್ತೇನು?

ಋತುಗಳಿಗೆಲ್ಲಾ ಅಧಿಪತಿಯಾಗಿರುವವನು ಸೂರ್ಯ. ಸೂರ್ಯನಿಂದಲೇ ಚಂದ್ರನೂ ಬೆಳಗುತ್ತಾನೆ. ನಮ್ಮ ಜೀವನಕ್ಕೂ, ಸೂರ್ಯನಿಗೂ ನಿಕಟ ಸಂಬಂಧವುಂಟು. ಸೂರ್ಯ ಚಂದ್ರರ ಸಂಚಾರ ಕ್ರಮವನ್ನನುಸರಿಸಿ ನಾವು ಋತು, ಮಾಸಗಳನ್ನು ಏರ್ಪಡಿಸಿಕೊಂಡಿದ್ದೇವೆ. ಕಾಲಕ್ಕೆ ತಕ್ಕ ಹಾಗೆ ಕೃಷಿ, ವ್ಯಾಪಾರ, ಉದ್ಯಮಗಳನ್ನು ಸಾಗಿಸುತ್ತ ಬಾಳುತ್ತೇವೆ. ಸೂರ್ಯ, ಚಂದ್ರರೇ ನಮ್ಮ ಜೀವನ ಕ್ರಮವನ್ನು ರೂಪಿಸಿದ ಮಹಾನುಭಾವರು. ಅವರ ಸಂಚಾರ ಕ್ರಮದ—ಸೌರಮಾನ, ಚಾಂದ್ರಮಾನ ಎಂಬ ಹಜ್ಜೆಗಳ ಎಣಿಕೆಯಿಂದಲೇ, 'ಚೈತ್ರ, ವೈಶಾಖ' ಎಂದೂ, 'ಮೇಷ, ವೃಷಭ' ಎಂದೂ, ಹೆಸರಿಟ್ಟುಕೊಂಡು ಸಂವತ್ಸರಾದಿ ಹಬ್ಬವನ್ನು ಆಚರಿಸುತ್ತೇವೆ. ಒಂದು ಮಹಾಯುಗದಷ್ಟು ಮಹತ್ವದ ಭಾರವೇ ನಮಗೆ ಈ ಒಂದೇ ವರ್ಷದಲ್ಲಿ ಅನುಭವವಾಗುತ್ತದೆ. ಇನ್ನು ಮುಂದಿನ ವರ್ಷವು ನವಯುಗವಾಗಬೇಕೆಂದೇ 'ಯುಗಾದಿ'ಯ ಭಾವ.

ದಕ್ಷಿಣ ಭಾರತದಲ್ಲಿ ಸೌರಮಾನ, ಚಾಂದ್ರಮಾನ ಎರಡೂ ಪ್ರಮುಖವಾಗಿವೆ. ಪಶ್ಚಿಮತೀರದ ಕನ್ನಡ ಪ್ರಾಂತದವರೂ,

ತಮಿಳು ಪ್ರಾಂತದವರೂ ಮೇಷಮಾಸ ಪ್ರಾರಂಭವನ್ನು ಯುಗಾದಿಯಾಗಿ ಆಚರಿಸುತ್ತಾರೆ. ಇತರ ಕನ್ನಡ ಪ್ರಾಂತದವರೂ ಆಂಧ್ರರೂ ಚೈತ್ರಮಾಸದಾದಿಯನ್ನು ಯುಗಾದಿಯಾಗಿ ಕೊಂಡಾಡುತ್ತಾರೆ. ಮಲಬಾರಿನಲ್ಲಿ ಸುಪ್ರಸಿದ್ಧವಾದ "ವಿಷು" (ಯುಗಾದಿ) ಹಬ್ಬವೂ ಮೇಷಮಾಸದಲ್ಲಿಯೇ ಬರುತ್ತದೆ. ಒಟ್ಟಿನಮೇಲೆ ಕಾಲದ ಅಧಿದೇವತೆಗಳಾದ ಸೂರ್ಯ-ಚಂದ್ರರೇ ಈ ಹಬ್ಬದ ಸಂಕೇತ ದೇವರು.

ಯುಗಾದಿಯ ಸಮಯ ಎಂತಹ ದಿವ್ಯ ಕಾಲವೆನ್ನುತ್ತೀರಿ? 'ಋತುಗಳ ರಾಜ' ಎನಿಸಿದ ವಸಂತರ್ತುವಿನ ಕಾಲ! ಮರಗಳೆಲ್ಲಾ ಫಲಿಸಿರುತ್ತವೆ. ಎಂಟು ದಿಕ್ಕೂ ಬಗೆಬಗೆಯ ಹೂ ಹಣ್ಣುಗಳ ಘುಮಘುಮ ಸುವಾಸನೆ! ಸೂರ್ಯನ ಕಾವೂ ಪ್ರಾರಂಭವಾಗುವ ಸಮಯ. ಹಣ್ಣುಗಳ ನೀರು ಇಂಗಿ, ಸವಿಯೇ ತುಂಬಿಸೂಸುತ್ತಿರುತ್ತದೆ. ಬಿಸಿಲಲ್ಲಿ ದಣಿದವರಿಗೆ ಎಂದಿಗಿಂತ ವಸಂತ ಕಾಲದ ಹಣ್ಣುಗಳು ರುಚಿ ಜಾಸ್ತಿ. ಮತ್ತೆ ಸುಮ್ಮನೆಯೇ ಕವಿಗಳು ವಸಂತವನ್ನು ಹೊಗಳುವುದು? ಈ ವೈಭವದ ವರ್ಷ ಪ್ರಾರಂಭದ ವಸಂತಋತುವಿನ ಭವ್ಯ ಚಾವಡಿಗೆ ಪ್ರವೇಶಮಾಡಲು ಯುಗಾದಿಯೊಂದು ಹೆಬ್ಬಾಗಿಲು. ಇದಿರುಕಾಣುವುದೇ ವಸಂತರ್ತುವಿನ ತೋಟ!

ಯುಗಾದಿಯ ಮುಂಚಿನ ದಿನವೇ ತಾಯಿ 'ಫಲದೇವರ'ನ್ನು ಮಾಡಿಡುತ್ತಾಳೆ. ಒಂದು ಇಡಿಯ ತೆಂಗಿನಕಾಯಿಗೆ ಕಣ್ಣು ಮೂಗು ಬಾಯಿಗಳನ್ನು ಬರೆಯುತ್ತಾಳೆ. ಕುಂಕುಮ ಹಚ್ಚುತ್ತಾಳೆ. ಬಿದಿರಗಡ್ಡಿಗಳನ್ನು ಹೊಡೆದು ಆಭರಣಗಳಿಂದ, ಹೂವುಗಳಿಂದ ಅಲಂಕರಿಸುತ್ತಾಳೆ. ಈ ಕಾಯಿ ದೇವರನ್ನೊಂದು ಅಕ್ಕಿಯ ಹರಿವಾಣದಲ್ಲಿ ಕೂಡಿಸಿ, ದೀಪ ಹಚ್ಚಿಡುತ್ತಾಳೆ. ಇದರ ಸುತ್ತುಲೂ ವಿವಿಧ ತರಕಾರಿಗಳನ್ನೂ, ಬಗೆಬಗೆಯ ಹಣ್ಣುಗಳನ್ನೂ ಓರಣವಾಗಿಟ್ಟಿರುತ್ತಾಳೆ— ವಸ್ತುಪ್ರದರ್ಶನಕ್ಕಿಡುವ ಹಾಗೆ. ಮನೆಯವರೆಲ್ಲಾ ಎದ್ದಕೂಡಲೇ ಮೊದಲು ಈ 'ಕಾಯಿದೇವರ' ದೃಶ್ಯ ನೋಡಿ ನಮಸ್ಕಾರ ಮಾಡಬೇಕು. ವರ್ಷವೆಲ್ಲಾ, ಹಣ್ಣು, ತರಕಾರಿ, ಪೈರು, ಪಚ್ಚೆಗಳಿಂದ ಭೂಮಿ ಸಸ್ಯಶಾಲಿನಿಯಾಗುವಂತೆ, ಕಲ್ಪವೃಕ್ಷವೆಂದು ಎತ್ತರವಾಗಿ ಬೆಳೆಯುವ, ತೆಂಗಿನಮರದ 'ಕಾಯಿದೇವರ' ಮೂಲಕ ಸೂರ್ಯನನ್ನು ಪ್ರಾರ್ಥಿಸುವುದೇ ಆ ಶುಭದರ್ಶನದ ಭಾವ! ಉಳಿದ ಹಣ್ಣು, ತರಕಾರಿಗಳೆಲ್ಲಾ ಆ ಕಾಯಿದೇವರ ಒಡನಾಡಿಗಳು!

ಯುಗಾದಿ ಹಬ್ಬದ ಆಕರ್ಷಕ ಆಚಾರಗಳಲ್ಲಿ ಇದೊಂದು ಅತ್ಯಾಕರ್ಷಕವಾದದ್ದು. ಮತ್ತೆ ಎಲ್ಲರೂ ಹಿರಿಯರಿಗೆ ಅಡ್ಡಬೀಳು

ವುದು, ಪಂಚಾಂಗಶ್ರವಣ, ಪೂಜೆ, ದಾನ ಧರ್ಮ, ಹಣ್ಣುಹಂಪಲಗಳೊಂದಿಗೆ ಹಬ್ಬದ ಪಾಯಸ, ಊಟ ಉಪಚಾರ ಎಲ್ಲಾ ಹೇಳುವುದೇಬೇಡ.

ಇನ್ನೊಂದು ವಿಶೇಷವೆಂದರೆ ಯುಗಾದಿ ಯಲ್ಲಿ ಬೇವಿನ ಹೂವಿನ ಗೊಜ್ಜು. ಸಿಹಿ ಯೊಂದಿಗೆ ಕಹಿಯೂ ಸ್ವಾಗತಯೋಗ್ಯ ವೆಂದು ಇದರ ತತ್ವ. ಅಲ್ಲವೇ ಮತ್ತೆ? ವರ್ಷಪೂರಾ ಸುಖವನ್ನೇ ಬಯಸುವುದು ಸರಿಯೆ? ದುಃಖವೂ ಸೇರಿಕೊಂಡಿರುವ ಸಾಧಾರಣ ಸುಖವನ್ನೆ ಸ್ವಾಗತಿಸುವಂತಹ ನಮ್ಮ ಉದಾತ್ತವಾದ ಸಂಸ್ಕೃತಿಯೇ ಈ 'ಬೇವು ಬೆಲ್ಲ' ಬೆರೆತ ಯುಗಾದಿ ಹಬ್ಬದ ಆಚರಣೆಯಲ್ಲಿ ಅಡಗಿದೆ.

ಇಡಿಯ ಒಂದು ವರ್ಷದ ಭವಿಷ್ಯ ಚಿಂತನೆ ತುಂಬಿದ ಹಿರಿಯರ ಆಶೀರ್ವಾದ ವನ್ನು ಪಡೆಯಲಿಕ್ಕೂ, ಮುಂದಿನ ಕಾಲ ಪ್ರವಾಹದಲ್ಲಿ ಈಜಾಡಲು ಹೊಸ ಉತ್ಸಾಹ ವನ್ನು ಪಡೆಯಲಿಕ್ಕೂ ನಮಗೆ ಪ್ರತಿ ವರ್ಷವೂ ಯುಗಾದಿ ಬೇಕೇ ಬೇಕು.

ಈ ವರ್ಷದ ಯುಗಾದಿ ಎಂದಿನಂತೆ ಅಲ್ಲ. ಇತ್ತೀಚೆಗಷ್ಟೇ ಕರ್ಣಾಟಕ ಪ್ರಾಂತ ವೆಲ್ಲಾ ಬೃಹನ್ಮೈಸೂರಾಗಿ ಕಂಗೊಳಿಸಿದ್ದು. ಅನಂತರ ಇದೇ ಮೊದಲನೇ ಯುಗಾದಿ. ಕಳೆದ ತಿಂಗಳಿನಲ್ಲಿ ಎರಡನೆಯ ಮಹಾ ಚುನಾವಣೆಯಾಗಿ ಪ್ರಜಾಸರಕಾರವು ಪುನ ರ್ನಿರ್ಮಾಣವನ್ನು ಕೈಗೊಳ್ಳಲಿದೆ. ಇವೆಲ್ಲಾ ಅಭಿವೃದ್ಧಿಯ ಪಥದಲ್ಲಿ ಸಾಗುವಂತೆ ಯುಗಾದಿಯ ಕೇಂದ್ರ ದೇವತೆಗಳಲ್ಲಿ ನಾವು ಪ್ರಾರ್ಥನೆಯನ್ನು ಸಲಿಸ ಬೇಕಾಗಿದೆ.

ಇನ್ನು ಈ ತಿಂಗಳಿಂದ ಸರಕಾರವು ನಮ್ಮ ಕ್ಯಾಲೆಂಡರಿನ ಕ್ರಿಸ್ತಶಕವನ್ನು ಬದ ಲಾಯಿಸುತಿದ್ದಾರೆ. ಸ್ವತಂತ್ರ ಭಾರತ ದೇಶದ್ದೇ ಆದ ಶಕಗಣನೆಯನ್ನು ವ್ಯವಹಾ ರಕ್ಕೆ ಬಳಸಿಕೊಳ್ಳಲು ನಾವು ಪಳಗಬೇಕಾ ಗಿದೆ. ಇದಕ್ಕಿಂತಲೂ ಮುಖ್ಯವಾದ ವಿಶೇಷ ವೆಂದರೆ ದಶಮಾಂಶ ನಾಣ್ಯ ಪದ್ಧತಿ ಇದೇ ತಿಂಗಳಿಂದ ಜಾರಿಗೆ ಬಂತು! ನೋಡಿ "ಚಂದಮಾಮ'ನ ಬೆಲೆ ಎಷ್ಟೊಂದು ಏರಿತು! ೫೦ ನಯೇ ಪೈಸೇ! ಚಿಕ್ಕವರೂ ದೊಡ್ಡವರೂ ಇನ್ನಿದನ್ನು ಕಲಿತುತೀರ ಬೇಕು. ದಶಮಾಂಶ ಪದ್ದತಿ ಬಹಳ ಸುಲಭವಾದರೂ, ಪ್ರಚಲಿತದಲ್ಲಿರುವ ನಾಣ್ಯಗಳೂ ಚಲಾಮಣಿಯಲ್ಲಿರುವಾಗ ಹೊಸ ಲೆಕ್ಕವನ್ನು ಸ್ವಲ್ಪ ಕಲಿತುಕೊಂಡೇ, ಇದನ್ನದರೊಂದಿಗೆ, ಅದನ್ನಿದರೊಂದಿಗೆ, ಕೊಡು-ಪಡೆಯಬೇಕಾಗುತ್ತದೆ. ಇದನ್ನೆಲ್ಲಾ ನಾವು ಈ ಯುಗಾದಿಯಿಂದಲೇ ಪ್ರಾರಂ ಭಿಸುತ್ತೇವೆ. ಹೀಗೆಲ್ಲಾ ಯುಗಾದಿಯ ವಿಶೇಷಗಳನ್ನು ನೆನಪೂಡಿಸುತ್ತಾ ನಿಮಗೆಲ್ಲ ರಿಗೂ ಶುಭಾಶಯಗಳನ್ನು ಕಳುಹಿಸುತ್ತಾನೆ 'ಚಂದಮಾಮ!'

# ಮು ಖ ಚಿ ತ್ರ

ಪಂಚಪಾಂಡವರು ಹನ್ನೆರಡು ವರ್ಷ ವನವಾಸವನ್ನು ಪೂರ್ಣಮಾಡಿಕೊಂಡದ್ದಾಯಿತು. ಇನ್ನು ಅವರು ಹನ್ನೆರಡು ತಿಂಗಳು ಅಜ್ಞಾತವಾಸ ಮಾಡಬೇಕಾಗಿದೆ. ಧರ್ಮರಾಯನು ತನ್ನ ತಮ್ಮಂದಿರೊಡನೆ ಆಲೋಚನೆಮಾಡಿ, ಅಜ್ಞಾತವಾಸವನ್ನು ಮತ್ಸ್ಯದೇಶದಲ್ಲಿ ವಿರಾಟರಾಜನ ಅರಮನೆಯಲ್ಲಿ ಕಳೆಯಲು ನಿಶ್ಚಯಿಸಿದ.

"ನಾನು ಬ್ರಾಹ್ಮಣಸನ್ಯಾಸಿ ವೇಷ ಧರಿಸಿ, ಕಂಕನೆಂಬ ಹೆಸರಿಟ್ಟುಕೊಂಡು ವಿರಾಟನ ದರ್ಬಾರಿನಲ್ಲಿ ಸೇರಿ, ಪಗಡೆಯಾಟದಿಂದ ಅವನನ್ನು ಸಂತೋಷಪಡಿಸುತ್ತೇನೆ" ಎಂದು ಧರ್ಮರಾಯನಂದ. ನಾನು ವಲಲನೆಂಬ ಹೆಸರಿಟ್ಟುಕೊಂಡು ವಿರಾಟರಾಯನಲ್ಲಿ ಅಡುಗೆಯವನಾಗಿ ಸೇರಿ ನನ್ನ ಅಡುಗೆಯ ರುಚಿಯಿಂದಲೂ ನನ್ನ ಶಕ್ತಿಯಿಂದಲೂ ಆತನಿಗೆ ಎಲ್ಲಾ ವಿಧದಲ್ಲಿ ಸಹಾಯಕನಾಗಿರುತ್ತೇನೆ" ಎಂದ ಭೀಮ. "ನಾನು ತಲೆಮುಡಿ ಕಟ್ಟಿಕೊಂಡು, ಆಭರಣ ಧರಿಸಿಕೊಂಡು, ಬೃಹನ್ನಳೆಯೆಂಬ ಹೆಸರಿನಿಂದ ಹೆಣ್ಣೂ ಗಂಡೂ ಅಲ್ಲದ ಅವತಾರದಿಂದ ಅಂತಃಪುರವನ್ನು ಪ್ರವೇಶಿಸಿ ಸ್ತ್ರೀಯರಿಗೆ ನೃತ್ಯವನ್ನು ಕಲಿಸುತ್ತೇನೆ." ಎಂದು ಅರ್ಜುನನಂದ. "ನನಗೆ ಅಶ್ವವಿದ್ಯೆ ಚೆನ್ನಾಗಿ ಗೊತ್ತು. ನಾನು ದಾಮಗ್ರಂಥಿ ಎಂಬ ಹೆಸರಿನಿಂದ ವಿರಾಟನ ಅಶ್ವಶಾಲೆಯಲ್ಲಿ ಉದ್ಯೋಗ ಸಂಪಾದಿಸಿಕೊಳ್ಳುತ್ತೇನೆ. ಕುದುರೆಗಳಿಗೆ ತಕ್ಕ ಶಿಕ್ಷಣ ಕೊಡಲಿಕ್ಕೂ. ಅವುಗಳ ರೋಗಕ್ಕೆ ಚಿಕಿತ್ಸೆಮಾಡಲಿಕ್ಕೂ ನನಗೆ ಗೊತ್ತಿದೆ." ಎಂದ ನಕುಲ. "ನಾನು ತಂತ್ರೀಪಾಲನೆಂದು ಹೆಸರಿಟ್ಟುಕೊಂಡು ವಿರಾಟನ ಗೋವುಗಳಿಗೆ ಪಾಲಕನಾಗಿರುತ್ತೇನೆ" ಎಂದು ಸಹದೇವ ಹೇಳಿದ. "ನಾನು ಸೈರಂಧ್ರಿಯಾಗಿ ವಿರಾಟನ ಪತ್ನಿ ಸುಧೇಷ್ಣೆಯಬಳಿಯಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತೇನೆ. ಸುಧೇಷ್ಣೆಯ ಬಳಿಯಲ್ಲಿದ್ದರೆ ನನಗೆ ಯಾವ ಕಷ್ಟವೂ ಉಂಟಾಗದು" ಎಂದಳು ದ್ರೌಪದಿ.

ಈ ವಿಧವಾಗಿ ನಿರ್ಣಯಿಸಿ ಪಾಂಡವರು ಧೌಮ್ಯರಿಗೂ ತಮ್ಮೊಂದಿಗಿರುವ ಬ್ರಾಹ್ಮಣರಿಗೂ, ಇತರ ಪರಿವಾರಗಳಿಗೂ ಬೀಳ್ಕೊಟ್ಟು ದ್ವೈತವನದಿಂದ ದ್ರೌಪದಿಯೊಂದಿಗೆ ಹೊರಟರು. ವಿರಾಟನಗರವು ಸಮೀಪಿಸಿದಾಗ ಅವರು ತಮ್ಮ ವೇಷಗಳನ್ನೆಲ್ಲಾ ಬದಲಾಯಿಸಿಕೊಂಡರು. ಶ್ಮಶಾನದಲ್ಲಿದ್ದ ಒಂದು ಶಮೀವೃಕ್ಷದಮೇಲೆ ತಮ್ಮ ಆಯುಧಗಳನ್ನೆಲ್ಲಾ ಕಟ್ಟಿ ಅಡಗಿಸಿಟ್ಟರು. ಯಾರು ನೋಡಿದರೂ ಅದೊಂದು ವಿಕೃತವಾದ ಶವದಹಾಗೆ ಕಾಣುವಂತೆ ಮಾಡಿಟ್ಟರು.

ತರುವಾಯ ಅವರು ತಮ್ಮೊಳಗೆ ತಾವು ರಹಸ್ಯವಾಗಿ ಸಂಬೋಧಿಸಿಕೊಳ್ಳಲು, ಜಯ, ಜಯಂತ, ವಿಜಯ, ಜಯತ್ಸೇನ, ಜಯದ್ಬಲ. ಎಂಬ ಐದು ಹೆಸರುಗಳನ್ನಿಟ್ಟುಕೊಂಡು ವಿರಾಟನಗರವನ್ನು ಪ್ರವೇಶಮಾಡಿದರು.




ಒಮ್ಮೆ ಬೋಧಿಸತ್ವನು ಕಾಶೀರಾಜನಾಗಿ ಜನ್ಮ ತಾಳಿದ. ಅವನು ಪರಿಪಾಲನೆ ಮಾಡುತ್ತಿದ್ದ ಕಾಲದಲ್ಲಿ ದೇಶದ ಸರಿಹದ್ದಿನಲ್ಲಿ ಕೆಲವರು ಪಿತೂರಿ ಮಾಡಿದರು. ಆ ಪಿತೂರಿಗಾರರನ್ನು ಅಡಗಿಸಲು ಅರಸನು ಸ್ವಲ್ಪ ಸೈನ್ಯವನ್ನು ತೆಗೆದುಕೊಂಡು ಸರಿಹದ್ದಿನ ಕಡೆಗೆ ಹೊರಟ. ಅಲ್ಲಿ ಯುದ್ಧ ನಡೆಯಿತು. ಯುದ್ಧದಲ್ಲಿ ಅರಸನಿಗೆ ಗಾಯವಾಯಿತು. ಅರಸನು ಏರಿಕೊಂಡ ಕುದುರೆ ಹೆದರಿ ಯುದ್ಧರಂಗದಿಂದ ಓಡಿಹೋಯಿತು.

ಸ್ವಲ್ಪಹೊತ್ತಿಗೆ ಅರಸನು ಕುದುರೆಯೊಂದಿಗೆ ಸರಿಹದ್ದು ಪ್ರಾಂತದ ಒಂದು ಗ್ರಾಮವನ್ನು ಸೇರಿದ. ಗ್ರಾಮ ಪಂಚಾಯಿತಚಾವಡಿಯಲ್ಲಿ ಆ ಗ್ರಾಮದ ಮೂವತ್ತು ಮನೆಯವರೂ ಸೇರಿಕೊಂಡು ಏನೋ ವ್ಯವಹಾರ ಮಾತಾಡಿಕೊಂಡಿದ್ದರು. ಕತ್ತಿ, ಢಾಲು, ಕವಚಗಳನ್ನು ಧರಿಸಿಕೊಂಡು ಅರಸನು ಅಲ್ಲಿ ಪ್ರತ್ಯಕ್ಷನಾದಾಗ, ಅಲ್ಲಿ ಪಂಚಾಯತದಲ್ಲಿ ಸೇರಿದ್ದವರೆಲ್ಲಾ ಭಯಪಟ್ಟು ನಾಲ್ಕುದಿಕ್ಕಿಗೆ ಚೆದರಿ ಓಡಿಹೋದರು. ಒಬ್ಬ ಗ್ರಾಮಸ್ಥನು ಮಾತ್ರ ಅಲ್ಲಿಂದ ಕದಲಲಿಲ್ಲ. ಆ ಒಬ್ಬ ಗ್ರಾಮಸ್ಥನು ರಾಜನಬಳಿಗೆ ಬಂದು, "ನೀನು ಪಿತೂರಿದಾರನೋ? ರಾಜನ ಪಕ್ಷದವನೊ?" ಎಂದು ಕೇಳಿದ.

"ಅಯ್ಯಾ, ನಾನು ರಾಜನ ಪಕ್ಷಪಾತಿಯೇ" ಎಂದು ಅರಸನು ಉತ್ತರವಿತ್ತ.

ಈ ಮಾತನ್ನು ಕೇಳಿ ಗ್ರಾಮಸ್ಥನಿಗೆ ತೃಪ್ತಿಯಾದಂತೆ ತೋರಿತು. "ಹಾಗಾದರೆ ನನ್ನ ಮನೆಗೆ ಹೋಗೋಣ ಬಾ" ಎಂದು ರಾಜನನ್ನು ತನ್ನ ಅತಿಥಿಯಾಗಿ ಕರೆದುಕೊಂಡು ಹೋದನು. ತನ್ನ ಮನೆಯಲ್ಲಿ ತನ್ನ ಪತ್ನಿಯಿಂದಲೇ ಆತನ ಕಾಲನ್ನು ತೊಳೆಸಿ, ಭೋಜನವಿಡಿಸಿ, ಎಲ್ಲಾ ವಿಧ ಅತಿಥಿ ಮರ್ಯಾದೆಗಳನ್ನೂ ಮಾಡಿದ. ರಾಜನು ಹತ್ತಿಬಂದ ಕುದುರೆಗೆ ತಾನೇ ಹುಲ್ಲು ನೀರು ಕೊಟ್ಟು ಉಪಚಾರ ಮಾಡಿದ.

ಅರಸನು ಆ ಗ್ರಾಮಸ್ಥನ ಮನೆಯಲ್ಲಿ ನಾಲ್ಕು ದಿನ ಅತಿಥಿಯಾಗಿದ್ದು ತನಗಾದ ಗಾಯಗಳನ್ನು ಗುಣಪಡಿಸಿಕೊಂಡ. ಇಷ್ಟರೊಳಗೆ ಪಿತೂರಿಯೆಲ್ಲಾ ಅಡಗಿಸಲ್ಪಟ್ಟಿತು. ಅರಸನು ಇನ್ನು ಕಾಶೀನಗರಕ್ಕೆ ಹೊರಡಲು ಸಿದ್ಧನಾಗಿ ಆ



ಗ್ರಾಮಸ್ಥನಿಗೆ ತನ್ನ ಕೃತಜ್ಞತೆಯನ್ನು ತಿಳಿಸಿ, "ಅಯ್ಯಾ, ನಾನು ಕಾಶೀನಗರವಾಸಿ. ನಮ್ಮ ಮನೆ ಕೋಟೆಯ ಆವರಣದೊಳಗಿದೆ. ನನಗೆ ಒಬ್ಬಳು ಹೆಂಡತಿಯೂ ಇಬ್ಬರು ಕುಮಾರರೂ ಇದ್ದಾರೆ. ನೀವು ಕಾಶೀನಗರಕ್ಕೆ ಬಂದು ಬಲ ಭಾಗದಲ್ಲಿರುವ ಉತ್ತರದ್ವಾರದ ಕಾವಲು ಗಾರನ ಹತ್ತಿರ, "ಮಹಾಶ್ವಾರೋಹನ ಮನೆ ಎಲ್ಲಿ?" ಎಂದು ಕೇಳಿದರೆ ಆತ ನಿಮ್ಮನ್ನು ನೇರಾಗಿ ನನ್ನ ಮನೆಗೆ ತಂದು ಬಿಡುತ್ತಾನೆ. ನೀವು ನಿಮಗಿಷ್ಟವಿರುವಷ್ಟುಕಾಲ ನಮ್ಮ ಮನೆಯಲ್ಲಿ ಅತಿಥಿಯಾಗಿರಬಹುದು" ಎಂದು ಹೇಳಿದ.

ತರುವಾಯ ಅರಸನು ಅಲ್ಲಿಂದ ಹೊರಟು ತನ್ನ ಸೇನೆಯೊಂದಿಗೆ ಕೂಡಿಕೊಂಡು ಕಾಶೀನಗರಕ್ಕೆ ಹೋದ. ಅಲ್ಲಿ ಉತ್ತರದಿಕ್ಕಿನ ದ್ವಾರಪಾಲಕನನ್ನು ಕರೆಸಿ ಅವನೊಂದಿಗೆ ಗುಟ್ಟಾಗಿ, "ಎಲೋ, ಯಾರಾದರೂ ನಿನ್ನಬಳಿಗೆ ಬಂದು 'ಮಹಾಶ್ವಾರೋಹನ ಮನೆಯೆಲ್ಲಿ?' ಎಂದು ಕೇಳಿದರೆ ಆತನನ್ನು ಒಳ್ಳೆಯ ಗೌರವದಿಂದ ನನ್ನಬಳಿಗೆ ಕರೆದುಕೊಂಡು ಬಾ" ಎಂದ.

ಆ ಗ್ರಾಮಸ್ಥನು ಬರುವನೆಂದು ಅರಸನು ಬಹಳಕಾಲ ಇದಿರುನೋಡಿದನು. ಆದರೆ ಅವನು ಬರಲೇ ಇಲ್ಲ. ಅವನನ್ನು ಯಾವವಿಧದಲ್ಲಾದರೂ ಬರಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಅರಸನು ಮಂತ್ರಿಗಳಿಗೆ ಹೇಳಿ ಆ ಸರಿಹದ್ದು ಗ್ರಾಮಗಳಮೇಲೆ ಹೊಸ ತೆರಿಗೆ ಹಾಕಿಸಿದ.

ಆಗಲೂ ಗ್ರಾಮಸ್ಥರು ಅರಸನಬಳಿಗೆ ಬರಲಿಲ್ಲ. ಮತ್ತೆ ಸ್ವಲ್ಪಕಾಲ ನೋಡಿ ಅರಸನು ಆ



ಗ್ರಾಮಸ್ಥರ ಮೇಲೆ ಮತ್ತೊಂದು ತೆರಿಗೆ ಹೇರಿಸಿದ. ಈ ವಿಧವಾಗಿ ಎರಡು ಮೂರು ಬಾರಿ ನಡೆದಾಗ, ಗ್ರಾಮದವರೆಲ್ಲಾ ಆ ಗ್ರಾಮಸ್ಥನನ್ನು ಕುರಿತು, "ಈ ತೆರಿಗೆಯಿಂದ ಸಾಯುತಿದ್ದೇವೆ. ಕಾಶೀನಗರದಲ್ಲಿ ನಿಮಗೆ ಸ್ನೇಹಿತನಿದ್ದಾನೆಂದು ಹೇಳಿದ್ದೀರಲ್ಲವೆ? ನೀವೊಮ್ಮೆ ಹೋಗಿ ಅವನನ್ನು ನೋಡಿ ಅವನ ಸಹಾಯದಿಂದ ಹೇಳಿಸಿ, ನಮ್ಮ ಈ ತೆರಿಗೆ ಭಾರದ ಸಂಕಷ್ಟವನ್ನು ಹೋಗಲಾಡಿಸಬಾರದೆ?" ಎಂದರು.

"ನನ್ನ ಸ್ನೇಹಿತನನ್ನು ನೋಡುವುದೇನೂ ಕಷ್ಟವಿಲ್ಲ. ಆದರೆ ಆತನಬಳಿಗೆ ಬರಿಗೈಯಲ್ಲಿ ಹೇಗೆ ಹೋಗಲೆಂಬುದೇ ಯೋಚನೆಯಾಗಿದೆ. ಅವನಿಗೊಬ್ಬಳು ಹೆಂಡತಿಯಿದ್ದಾಳಂತೆ, ಇಬ್ಬರು ಕುಮಾರರಿದ್ದಾರಂತೆ. ಅವರಿಗೆಲ್ಲಾ ಬಟ್ಟೆಯ

ನ್ನೊಯ್ಯ ಬೇಡವೆ? ಆತನ ಹೆಂಡತಿಗೆ ಕಾಣಿಕೆಯಾಗಿ ನಗವ್ನೋ ನಟ್ಟೋ ಕೊಂಡಯ್ಯಬೇಡವೆ? ನೀವು ಅವುಗಳನ್ನೆಲ್ಲಾ ಸಿದ್ಧಪಡಿಸಿ ಕೊಟ್ಟರೆ ನಾನು ಹೋಗಿ ನೀವು ಹೇಳಿದಹಾಗೇ ಮಾಡಿ ಬರುತ್ತೇನೆ" ಎಂದ ಆ ಗ್ರಾಮಸ್ಥ.

ಗ್ರಾಮಸ್ಥರೆಲ್ಲಾ ಬಟ್ಟೆಗಳನ್ನೂ, ನಗಗಳನ್ನೂ ಒದಗಿಸಿ ಕೊಟ್ಟರು. ಅವೆಲ್ಲಾ ಹಳ್ಳಿಗಾಡಿನವರು ಉಪಯೊಗಿಸುವಂತಹ ಸಾಮಾನ್ಯ ಬಟ್ಟೆಗಳೂ, ನಗಗಳೂ ಆಗಿದ್ದುವು. ಗ್ರಾಮಸ್ಥನು ತನ್ನ ಹೆಂಡತಿಯಿಂದ ರೊಟ್ಟಿಗಳನ್ನೂ, ಏನೇನೋ ಸಿಹಿತಿಂಡಿಗಳನ್ನೂ ತಯಾರುಮಾಡಿಸಿದ.

ಒಯ್ಯಬೇಕಾದ ಎಲ್ಲ ವಸ್ತುಗಳನ್ನೂ ಗಂಟು ಕಟ್ಟಿ ತೆಗೆದುಕೊಂಡು ಪ್ರಯಾಣ ಹೊರಟ. ಕೆಲವು ದಿನಗಳಲ್ಲಿ ಅವನು ಕಾಶೀನಗರದ ಕೋಟೆಯಬಳಿಗೆ ಬಂದು ಬಲಕಡೆಗೆ ತಿರುಗಿ ಉತ್ತರದ ದ್ವಾರವನ್ನು ಸಮಿಾಪಿಸಿ ಅಲ್ಲಿಯ ದ್ವಾರಪಾಲಕನನ್ನು ಕುರಿತು, "ಅಯ್ಯಾ, ನಾನು ಮಹಾಶ್ವಾರೋಹನ ಮನೆಗೆ ಹೋಗಬೇಕು. ದಾರಿ ಹೇಗೆ?" ಎಂದು ಕೇಳಿದ.

ತತ್ಕ್ಷಣವೇ ದ್ವಾರಪಾಲಕನು ಆ ಗ್ರಾಮಸ್ಥನನ್ನು ತನ್ನೊಂದಿಗೆ ಕರೆದುಕೊಂಡು ಅರಸನ ಅಂತಃಪುರಕ್ಕೆ ಕರೆದುಕೊಂಡು ಹೋಗಿ ಅರಸನ ಮುಂದೆ ನಿಲ್ಲಿಸಿದ.

ಅವನನ್ನು ನೋಡಿ ಅರಸನಿಗೆ ಪರಮಾನಂದವಾಯಿತು. ಆ ಗ್ರಾಮಸ್ಥನು ತನಗಾಗಿ ಹೊತ್ತುಕೊಂಡು ಬಂದ ತಿಂಡಿಗಳನ್ನು ತನ್ನ ಹೆಂಡತಿ, ಮಕ್ಕಳು, ಮಂತ್ರಿ. ಸಾಮಂತರೆಲ್ಲರಿಗೂ ತಿನ್ನಲಿತ್ತು, ತಾನುಕೂಡಾ ತಿಂದ. ಅವನು ತಂದ



ಸಾಮಾನ್ಯ ಮೊರಟು ಬಟ್ಟೆಗಳನ್ನು ಹೆಂಡತಿ, ಮಕ್ಕಳಿಗೆ ಉಡಬೇಕೆಂದು ಹೇಳಿ, ತಾನೂ ಉಟ್ಟುಕೊಂಡನು. ತರುವಾಯ ಅರಸನು ತನ್ನ ಅತಿಥಿಗೆ ಮೇಲಾದ ಪಟ್ಟೆಯ ಬಟ್ಟೆಗಳನ್ನು ಉಡಲುಕೊಟ್ಟು ತನ್ನ ಪಾಕಶಾಲೆಯಲ್ಲಿ ತಯಾರಾದ ಶ್ರೇಷ್ಠ ಭೋಜನವನ್ನು ಆವನಿಗಿಡಿಸಿದನು. ತನ್ನ ಗ್ರಾಮದಮೇಲೆ ಹಾಕಲಾದ ತೆರಿಗೆಯನ್ನು ತೆಗೆಯಿಸುವ ಪ್ರಯತ್ನಕ್ಕಾಗಿ ಬಂದಿದ್ದಾನೆಂದು ತಿಳಿದು, ಆ ತೆರಿಗೆಗಳನ್ನು ರದ್ದುಮಾಡಬೇಕೆಂದು ಆ ಕೂಡಲೇ ಅರಸನು ಮಂತ್ರಿಗಳಿಗೆ ಆಜ್ಞೆ ಮಾಡಿದ.

ತರುವಾಯ ಅರಸನು ಸಭೆ ಕೂಡಿಸಿದನು. ಮಂತ್ರಿ ಸಾಮಂತರೆಲ್ಲರ ಸಮಕ್ಷಮದಲ್ಲಿ ಅರಸನು ಆ ಗ್ರಾಮಸ್ಥನನ್ನು ಅರ್ಧರಾಜ್ಯಕ್ಕೆ ಅರಸನನ್ನಾಗಿ ಮಾಡಿ ಪ್ರಕಟಪಡಿಸಿದನು. ಈ ಬಡ ಗ್ರಾಮವಾಸಿ ಬಂದ ಕ್ಷಣದಿಂದಲೂ ಅರಸನು ಅವನಮೇಲೆ ತೋರಿಸುವ ಆದರವು ಮಂತ್ರಿಗಳಿಗೆ ಸ್ವಲ್ಪ ಕೂಡಾ ಹಿಡಿಸಲಿಲ್ಲ. ಅವನನ್ನು ಅರ್ಧ ರಾಜ್ಯಕ್ಕೆ ಅಧಿಪತಿ ಮಾಡಿದ್ದಂತೂ ಬಹಳ ಅವಿವೇಕವೆಂದು ಅವರ ದೃಷ್ಟಿಗೆ ತಟ್ಟಿತು.

ಆದರೆ ಅರಸನ ಇದಿರು ಅದನ್ನು ಹೇಳಲಿಕ್ಕೆ ಅವರಿಗೆ ಧೈರ್ಯ ಬರಲಿಲ್ಲ. ಅವರೆಲ್ಲಾ ಸೇರಿ ರಾಜಕುಮಾರನನ್ನು ಬಳಿಗೆ ಕರೆದು, "ಅಪ್ಪಾ, ಮಹಾರಾಜರು ನಿನಗೆ ತುಂಬಾ ಅನ್ಯಾಯ ಮಾಡಿಬಿಟ್ಟರು. ನಿನಗೆ ಸೇರಬೇಕಾದ ರಾಜ್ಯದಲ್ಲಿ ಅರ್ಧ ಭಾಗವನ್ನು ನಿಷ್ಕಾರಣವಾಗಿ ಆ ಅನಾಗರಿಕನಿಗೆ ಕೊಟ್ಟುಬಿಟ್ಟರು. ಇದಕ್ಕಾಗಿ ನೀನು ಮಹಾರಾಜರ ಹತ್ತಿರ ಆಕ್ಷೇಪಣೆ ಹೇಳ



ಬೇಕು. ಇದು ನಿನ್ನ ಕರ್ತವ್ಯ" ಎಂದು ಅವನಿಗೆ ಚೆನ್ನಾಗಿ ಬೋಧನೆ ತುಂಬಿಸಿ ಕಳುಹಿಸಿದರು.

ಅವರು ಹೇಳಿದ ಹಾಗೆಯೇ ರಾಜಕುಮಾರನು ಅರಸನಬಳಿಗೆ ಹೋಗಿ, ಆ ಗ್ರಾಮಸ್ಥನಿಗೆ ಅರ್ಧರಾಜ್ಯ ವಿತ್ತಿದ್ದಕ್ಕೆ ತನ್ನ ಆಕ್ಷೇಪಣೆಯನ್ನು ಹೇಳಿಕೊಂಡ.

ಎಲ್ಲಾ ಕೇಳಿ ಅರಸನು ತಲೆಯಾಡಿಸಿ, "ಕುಮಾರಾ, ಇದು ನಿನಗೆ ಹುಟ್ಟಿದ ಸ್ವಂತ ಆಲೋಚನೆಯಲ್ಲ; ನನ್ನಹತ್ತಿರ ಈಗ ಕೇಳಿದ ಪ್ರಶ್ನೆಯನ್ನೇ ಸಭೆಯಲ್ಲಿ ಕೇಳು. ಆಗ ನಿನಗೆ ನಾನು ತಕ್ಕ ಸಮಾಧಾನ ಹೇಳುತ್ತೇನೆ" ಎಂದ.

ರಾಜಕುಮಾರನು ಆ ಪ್ರಕಾರ ತುಂಬಿದ ಸಭೆಯಲ್ಲಿ ತಂದೆಯನ್ನು ಕುರಿತು, "ಈ ಗ್ರಾಮಸ್ಥನಿಗೆ ನೀವು ಅರ್ಧರಾಜ್ಯವನ್ನು ಕೊಡಲು ತಕ್ಕ ಕಾರಣವೇನು?" ಎಂದು ಕೇಳಿದ.

ಕೂಡಲೇ ಅರಸ, "ಕುಮಾರಾ, ಈ ಗ್ರಾಮಸ್ಥನು ಹಿಂದೊಮ್ಮೆ ನನಗೆ ಪ್ರಾಣದಾನ ಮಾಡಿದ್ದಾನೆ. ಆ ಸಂಗತಿ ನಿನಗೆ ಗೊತ್ತಿಲ್ಲ" ಎಂದು ಹಿಂದೆ ಸರಿಹದ್ದು ಪ್ರಾಂತದಲ್ಲಿ ನಡೆದ ಪಿತೂರಿ ಯುದ್ಧದ ಕಾಲದಲ್ಲಿ ಆ ಗ್ರಾಮಸ್ಥನು ತನ್ನನ್ನು ಕಾಪಾಡಿದ ವೃತ್ತಾಂತವನ್ನೆಲ್ಲಾ ವಿವರವಾಗಿ ಹೇಳಿ ಮತ್ತೆ ಹೀಗೆಂದ:

"ಅಪಾತ್ರನಿಗೆ ದಾನಮಾಡುವುದು ಎಷ್ಟು ತಪ್ಪೋ, ಸುಪಾತ್ರನಿಗೆ ದಾನಮಾಡದೆ ಹೋಗುವುದುಕೂಡಾ ಅಷ್ಟೇ ತಪ್ಪು. ನಾನು ರಾಜನೆಂದು ತಿಳಿಯದಿರುವಾಗಲೇ ಈ ಗ್ರಾಮಸ್ಥನು ನನ್ನಲ್ಲಿ ವಿಶ್ವಾಸ ತೋರಿಸಿದ. ನಾನು ಬರಬೇಕೆಂದು ಹೇಳಿದ್ದರೂ ಈತ ಪ್ರತ್ಯುಪಕಾರ ಪಡೆಯುವ ಉದ್ದೇಶದವನಲ್ಲವಾದ್ದರಿಂದಲೇ ಇಲ್ಲಿಗೆ ಬರಲಿಲ್ಲ. ಕಡೆಗಾದರೂ ಗ್ರಾಮದ ಕ್ಷೇಮವನ್ನು ಕಾಪಾಡಲಿಕ್ಕಾಗಿಯೇ ಇಲ್ಲಿಗೆ ಬಂದನಲ್ಲದೆ ಸ್ವಾರ್ಥಕ್ಕಾಗಿಯಲ್ಲ. ಈಗ ಅರ್ಧರಾಜ್ಯಕ್ಕೆ ಇವನಿಗಿಂತ ಅರ್ಹನಾದವನು ಯಾರು?"

ಈ ಮಾತನ್ನು ಕೇಳಿ ಮಂತ್ರಿ ಸಾಮಂತರೆಲ್ಲಾ ನಾಚಿಕೊಂಡರು. ರಾಜಕುಮಾರನು ತನ್ನ ತಪ್ಪು ಗ್ರಹಿಕೆಯನ್ನು ತಿಳಿದುಕೊಂಡನು. ತಂದೆಯ ಮಾತುಗಳು ಅವನಿಗೆ ತುಂಬಾ ಸಂತೋಷವುಂಟುಮಾಡಿದುವು. ಅರಸನು ತನ್ನ ಜೀವನಕಾಲದಲ್ಲೆಲ್ಲಾ ಆ ಗ್ರಾಮಸ್ಥನನ್ನು ಬಹಳವಾಗಿ ಆದರಿಸುತಿದ್ದ.






# 3

[ಪಿಂಗಳನ ಸಹಾಯದಿಂದ ಪದ್ಮಪಾದನು ಸರೋವರದೊಳಗಿಂದ ಎರಡು ಮೊಸಳೆ ಮರಿಗಳನ್ನು ಹಿಡಿದುಕೊಂಡು ಬಂದ. ತರುವಾಯ ಪಿಂಗಳನಿಗೆ ತನ್ನ ಸಂಗತಿ ಹೇಳಿ ಭಲ್ಲೂಕ ಪರ್ವತಕ್ಕೆ ತನ್ನೊಂದಿಗೆ ಬರಬೇಕೆಂದ. ತನ್ನ ತಂದೆಯ ಗುರು ಹೇಳಿದ ಮಹಾ ಮಾಯನೆಂಬ ಮಂತ್ರವಾದಿಯ ವೃತ್ತಾಂತವನ್ನು ಪಿಂಗಳನಿಗೆ ಹೇಳತೊಡಗಿದ—]

**ಭ**ಲ್ಲೂಕಪರ್ವತದ ಕಣಿವೆಯಲ್ಲಿ ಪ್ರವಹಿಸುವ ಒಂದು ನದಿಯ ತಳದಲ್ಲಿ ಒಂದು ಪಾಳುಬಿದ್ದ ದೇವಾಲಯವುಂಟು. ಆ ಆಲಯದೊಳಗೆ ಮಹಾ ಮಾಯನೆಂಬ ದೊಡ್ಡ ಮಾಂತ್ರಿಕನು ಸಮಾಧಿಯಾದನು. ಅವನ ಸಮಾಧಿಯ ಸ್ಥಳದಲ್ಲಿ ಮುಖ್ಯವಾದ ಮೂರು ವಸ್ತುಗಳಿವೆ. ಒಂದು, ಅವನ ಬೆರಳಿನಲ್ಲಿರುವ ಉಂಗುರ. ಅದನ್ನು ಧರಿಸಿಕೊಂಡವನಿಗೆ ಭೂಗರ್ಭದಲ್ಲಿರುವ ನಿಧಿ ನಿಕ್ಷೇಪಗಳೆಲ್ಲಾ ಕಾಣಿಸುತ್ತವೆ. ಇನ್ನೊಂದು, ವಜ್ರ ಕೆತ್ತಿದ ಹಿಡಿಯುಳ್ಳ ಕತ್ತಿ. ಅದರಿಂದ ಹೊರಡುವ ಅಗ್ನಿಕಣಗಳು ಎಂತಹ ಶತ್ರುವನ್ನಾದರೂ ನಾಶಪಡಿಸಬಲ್ಲವು. ಮೂರನೆಯದು, ಬಂಗಾರದಿಂದ ಮಾಡಿದ ಭೂಗೋಳ. ಆ ಭೂಗೋಳವನ್ನು ಸಂಪಾದಿಸಿದವನು ಅದನ್ನು ಗುಂಡಗೆ ತಿರುಗಿಸಿ, ತಾನು ಯಾವ ದೇಶಕ್ಕೆ ಚಕ್ರವರ್ತಿ ಯಾಗಬೇಕೆಂದು ಕೋರಿಕೊಂಡರೂ ಆ ಕೂಡಲೇ ಅವನ ಕೋರಿಕೆ ನೆರವೇರುತ್ತದೆ.

ಆದರೆ ಮಹಾಮಾಯನಿಂದ ಇವುಗಳನ್ನು ಪಡೆಯಬೇಕಾದರೆ ಮೊದಲು ಆ ಸರಸ್ಸಿನೊಳಗೆ ಮೊಸಳೆಯ ರೂಪದಲ್ಲಿರುವ ಅವನ ಶಿಷ್ಯರನ್ನು ಕೈಸೇರಿಸಿಕೊಳ್ಳಬೇಕು. ಇದಕ್ಕೆ ಪಿಂಗಳನೆಂಬ ಬೆಸ್ತನ ಸಹಾಯ ಅಗತ್ಯವಾಗುತ್ತದೆ. ತರು



ರೂಪದಲ್ಲಿರುವವರೊಂದಿಗೆ ಹೋರಾಡಿ ಗೆಲ್ಲಲು ಹೇಗೆ ಸಾಧ್ಯವಾದೀತು?

"ನನ್ನ ಆ ಸಹೋದರರು ಕೂಡಾ ನನ್ನ ಹಾಗೆ ಬೆದರಿ ಹೋಗಿರಬೇಕು. ಗುರು ನಾವು ಮೂವರನ್ನೂ ಉದ್ದೇಶಿಸಿದಂತೆ ಗಟ್ಟಿಯಾಗಿ ನಕ್ಕು, "ಮಹಾಮಾಯನ ಶಿಷ್ಯನನ್ನು ಜಯಿಸುವುದಕ್ಕೆ ನಾನು ಹೇಳಿದ ಆ ಬೆಸ್ತ ಪಿಂಗಳನು ನಿಮಗೆ ತುಂಬಾ ಸಹಾಯ ಮಾಡಬಲ್ಲ. ಆದರೆ, ಈ ಪ್ರಯತ್ನದಲ್ಲಿ ನೀವು ಪ್ರಾಣ ಕಳೆದುಕೊಳ್ಳಬೇಕಾಗಿ ಬಂದರೂ ಬಂದೀತು. ಮೊದಲೇ ಎಚ್ಚರಿಕೆ ಕೊಡುತ್ತೇನೆ" ಎಂದರು.

"ನಾವು ಮೂವರೊಳಗೆ ಮೊದಲು ಮಂಡನನು ಉತ್ತರಕೊಟ್ಟ. "ನಾನು ಈ ಸಾಹಸಕ್ಕೆ ಧುಮುಕಲು ತಯಾರಾಗಿದ್ದೇನೆ. ನನ್ನ ತಂದೆ ಬಿಟ್ಟುಹೋದ ಮಂತ್ರದ ಗ್ರಂಥದ ಮೇಲಿರು ಆಶೆಯಿಂದ ಪ್ರಾಣದಮೇಲೆಯೂ ನನಗೆ ಮಮಕಾರವಿಲ್ಲ" ಎಂದ.

"ಆತ ಹಾಗೆ ಹೇಳಿದಾಗ ನನಗೂ ಅನುರೂಪನಿಗೂ ಕೂಡಾ ಧೈರ್ಯ ಬಂತು. ನಾವೂ ಮಹಾಮಾಯನ ಶಿಷ್ಯರೊಂದಿಗೆ ಹೋರಾಡಲು ಸಿದ್ಧರೇ ಇದ್ದೇವೆ ಎಂದೆವು. ಆಗ ಗುರು ನಮಗೆ ಆ ಸರೋವರಕ್ಕೆ ದಾರಿ ತಿಳಿಸಿ, ನಿನ್ನಿಂದ ಕೈಕಾಲು ಕಟ್ಟಿಸಿಕೊಂಡು ಸರೋವರದಲ್ಲಿ ಬಿದ್ದ ಮೇಲೆ ಮಾಡಬೇಕಾದ್ದನ್ನೆಲ್ಲಾ ಚೆನ್ನಾಗಿ ವಿವರಿಸಿ ಹೇಳಿದರು."

"ಈಗ ನಾನು ಮಾಡಬೇಕಾದ ಸಹಾಯ ಮಾಡಿದ್ದಾಯಿತು. ಈಗ ನಿಮ್ಮೊಂದಿಗೆ ಭಲ್ಲೂಕ

ವಾಯ ಅವನ ಸಹಾಯದಿಂದಲೇ ಮಹಾಮಾಯನ ಉಂಗುರ, ಕತ್ತಿ, ಭೂಗೋಳಗಳನ್ನು ಕೂಡಾ ಸಾಧಿಸಿಕೊಳ್ಳಬಹುದು. ಆ ಮೂರು ವಸ್ತುಗಳನ್ನೂ ಸಾಧಿಸಿಕೊಂಡವರಿಗೆ ಮಾತ್ರವೇ ನಿಮ್ಮ ತಂದೆ ಬಿಟ್ಟುಹೋದ ಗ್ರಂಥವು ಉಪಯೋಗಪಡುತ್ತದೆ.

"ನಮ್ಮ ತಂದೆಯ ಗುರು ಇಷ್ಟರವರೆಗೂ ಹೇಳಿ ನಮ್ಮ ಮೂವರ ಮುಖವನ್ನೂ ಪರೀಕ್ಷೆ ಮಾಡಿ ನೋಡಿದರು. ಆ ಸರೋವರದೊಳಗೆ ಮೊಸಳೆಯ ರೂಪದಲ್ಲಿರುವ ಮಹಾಮಾಯನ ಶಿಷ್ಯರನ್ನು ವಶಪಡಿಸಿಕೊಳ್ಳಬೇಕೆಂದಾಗಲೇ ನನಗೆ ರೋಮಾಂಚನವಾಯಿತು. ಮಹಾಮಂತ್ರವೇತ್ತನಾದ ಮಹಾಮಾಯನ ಶಿಷ್ಯರು, ಸರೋವರದೊಳಗೆ ಭಯಂಕರವಾದ ಮೊಸಳೆಯ

ಪರ್ವತಕ್ಕೆ ನಾನು ಬರಬೇಕಾದ ಅಗತ್ಯವೇನು ಬಂತು?" ಎಂದು ಪಿಂಗಳ ಕೇಳಿದ.

ಪದ್ಮಪಾದನು ಕೂಡಲೇ ಉತ್ತರಿಸಲಿಲ್ಲ. ಸ್ವಲ್ಪಹೊತ್ತು ಆಲೋಚಿಸಿ, ಬಳಿಕ ಪಿಂಗಳನ ಭುಜವನ್ನು ಆಪ್ಯಾಯವಾಗಿ ತಟ್ಟುತ್ತಾ, "ಪಿಂಗಳಾ, ನೀನು ನನ್ನನ್ನು ಕುರಿತು ಏನೋ ಭಯಪಡುವಹಾಗಿದೆ. ನನ್ನಿಂದ ನಿನಗೆ ಯಾವ ಹಾನಿಯೂ ಉಂಟಾಗುವುದಿಲ್ಲ, ಮಾತ್ರವಲ್ಲ ಬಹಳ ದೊಡ್ಡ ಶುಭವೇ ಉಂಟಾಗುತ್ತದೆ. ನನ್ನನ್ನು ನಂಬು. ಮಹಾಮಾಯನು ಸಮಾಧಿಯಾಗಿರುವ ಗುಡಿಯೊಳಗೆ ಪ್ರವೇಶಿಸಬೇಕಾದವನು ನೀನೇ!" ಎಂದ.

"ನನಗೆ ಯಾವ ಹಾನಿಯೂ ಆಗುವುದಿಲ್ಲವೆಂದು ನೀವು ಪ್ರಮಾಣ ಮಾಡಿಕೊಡುವಿರಾ?" ಎಂದು ಪಿಂಗಳನು ಕೇಳಿದ.

ಪದ್ಮಪಾದನು ಪ್ರಮಾಣ ಮಾಡಿದ. ಪಿಂಗಳನಿಗೆ ಆ ಕ್ಷಣದಲ್ಲಿ ತಾಯಿಯ ನೆನಪು ಬಂತು. "ನಾನು ಭಲ್ಲೂಕಪರ್ವತದಿಂದ ಎಷ್ಟು ದಿವಸಕ್ಕೆ ಹಿಂದಿರುಗಿ ಬರಬೇಕು?" ಎಂದು ಕೇಳಿದ.

"ಎರಡು ತಿಂಗಳಿಗಿಂತ ಹೆಚ್ಚಾಗುವುದಿಲ್ಲ. ಆದರೆ ನೀನು ಅಲ್ಲಿಂದ ನಿನ್ನ ಮನೆಗೆ ಹೋಗುವಾಗ ಈ ರೀತಿಯಾಗಿರುವುದಿಲ್ಲ. ನಿನ್ನನ್ನು ಈ ಪ್ರಪಂಚದಲ್ಲೇ ದೊಡ್ಡ ಧನಿಕನನ್ನಾಗಿ ಮಾಡುತ್ತೇನೆಂದು ನಾನು ಮಾತು ಕೊಟ್ಟಿದ್ದೇನಷ್ಟೆ?" ಎಂದ ಪದ್ಮಪಾದ.

"ಮುಂದಿನ ಮಾತು ಹಾಗಿರಲಿ. ಈಗ ನಾನು ಕೈಯಲ್ಲಿ ಒಡಕು ಕಾಸೂ ಇಲ್ಲದ ಬಡವ.



ನಾನು ಮನೆಯಲ್ಲಿಲ್ಲದ ಎರಡು ತಿಂಗಳಕಾಲ ನನ್ನ ಸೋದರರೂ, ತಾಯಿಯೂ ಹೇಗೆ ಬದುಕಬೇಕು?" ಎಂದ ಪಿಂಗಳ.

ಪದ್ಮಪಾದನು ಕುದುರೆಯಮೇಲೆ ನೇತಾಡುವ ಒಂದು ಸಂಚಿಯಿಂದ ಸಾವಿರ ಮೊಹರಿಗಳನ್ನು ತೆಗೆದು ಪಿಂಗಳನಿಗೆ ಕೊಟ್ಟು, "ಈ ಹಣವನ್ನು ನಿನ್ನ ತಾಯಿಗೆ ಕೊಟ್ಟು ಬಾ. ನಿನ್ನ ಕ್ಷೇಮವನ್ನು ಕುರಿತು ಅವಳೇನೂ ಭಯಪಡಬೇಕಾಗಿಲ್ಲ. ಧೈರ್ಯವಾಗಿರುವಂತೆ ಹೇಳು. ನಾಳೆ ಇದೇ ಸಮಯಕ್ಕೆ ಇಲ್ಲಿಯೇ ನನ್ನನ್ನು ನೋಡು!" ಎಂದ.

ಪಿಂಗಳನು ಪದ್ಮಪಾದನು ಕೊಟ್ಟ ಹಣವನ್ನು ತೆಗೆದುಕೊಂಡು ಅತ್ಯಾನಂದದಿಂದ ಮನೆಗೆ ಹೋದ. ಅವನು ಮನೆ ಮುಟ್ಟಿದಾಗ ಅಲ್ಲಿ

ಅಣ್ಣಂದಿರಿರಲಿಲ್ಲ. ತಾಯಿ ಒಬ್ಬಳೇ ಅವನ ದಾರಿ ನೋಡುತ್ತಿದ್ದಳು. ಪಿಂಗಳನು ತಾನು ತಂದ ಸಾವಿರ ಮೊಹರಿಗಳನ್ನು ತಾಯಿಯ ಮುಂದೆ ಸುರಿದ. ಅವಳು ಬೆದರಿ ನಡುಗಿದಳು. ಸ್ವಲ್ಪ ಹೊತ್ತು ಮಾತಾಡದೆ ಅನಂತರ,

"ಪಿಂಗಳಾ, ಇಷ್ಟು ಹಣ ಎಲ್ಲಿಂದ? ನೀನು ಯಾವುದೋ ಅಪಾಯದಲ್ಲಿ ಸಿಕ್ಕಿರುವೆಯೆಂದು ನನಗೆ ಭಯವಾಗಿದೆ" ಎಂದಳು ತಾಯಿ.

ಪಿಂಗಳನು ನಡೆದ ಸಂಗತಿಯನ್ನೆಲ್ಲಾ ತಾಯಿಗೆ ಹೇಳಿದ. ತಾನು ಎರಡು ತಿಂಗಳಿನಲ್ಲಿ ಖಂಡಿತಾ ಮನೆಗೆ ಬರುವೆನೆಂದೂ, ಏನೂ ಹೆದರ ಬೇಕಾಗಿಲ್ಲವೆಂದೂ ಹೇಳಿ ಅವಳಿಗೆ ಧೈರ್ಯ ವುಂಟುಮಾಡಿದ. "ಅಪ್ಪಾ. ಮಗನೇ, ಮಾಂತ್ರಿಕರ ಒಳ್ಳೆಯತನದಲ್ಲಿ ನನಗೆ ನಂಬಿಕೆಯಿಲ್ಲಪ್ಪಾ. ಈ ಪದ್ಮಪಾದನು ಎಲ್ಲರಂಥ ವನಲ್ಲವೆಂದು ಹೇಳುತ್ತೀ. ದೇವರ ದಯದಿಂದ ನಿನಗೆ ಯಾವ ಕಷ್ಟವೂ ಬಾರದೆ, ಸುಖವಾಗಿ ಮನೆಗೆ ತಿರುಗಿ ಬರಬೇಕೆಂದು ಮುಕ್ಕೋಟಿ ದೇವತೆಗಳಿಗೂ ನಮಸ್ಕಾರ ಮಾಡುತ್ತೇನೆ" ಎಂದಳು ತಾಯಿ.

ಮರುದಿನ ಪದ್ಮಪಾದನು ಹೇಳಿದ ವೇಳೆಗೆ ಪಿಂಗಳನು ಆ ಸರೋವರದ ಬಳಿಗೆ ಹೋದ. ಸರೋವರದ ಬದಿಯಲ್ಲಿ ಪದ್ಮಪಾದನೊಬ್ಬನೇ ಕುದುಕುಳಿತಿದ್ದ. ಅವನ ಬಳಿಯಲ್ಲಿ ಒಂದು ಸಂಚಿಯ ಹೊರತು ಕುದುರೆಯೋ ಮತ್ತಾವ ವಾಹನವೋ ಇರಲಿಲ್ಲ.

ಪಿಂಗಳನು ಅವನನ್ನು ಸಮೀಪಿಸುತ್ತಲೇ, "ಪದ್ಮಪಾದಾ, ನಮ್ಮದೀಗ ಕಾಲುನಡಿಗೆಯ





ಪ್ರಯಾಣವೇನು?" ಎಂದು ಕೇಳಿದ. "ಕಾಲು ನಡಿಗೆ ಯೆಲ್ಲಿಬಂತು? ಅದು ಸಾಧ್ಯವಿಲ್ಲ. ಭಲ್ಲೂಕಪರ್ವತವನ್ನು ಮುಟ್ಟಬೇಕಾದರೆ ಇನ್ನೂರು ಮುನ್ನೂರು ಮೈಲು ಪ್ರಯಾಣ ಮಾಡಬೇಕು. ಆ ಪ್ರಯಾಣಕ್ಕೆ ನಮ್ಮ ಕುದುರೆಗಳು ಉಪಯೋಗವಿಲ್ಲ. ಇನ್ನು ಎರಡು ದಿನಗಳಿಗೆ ಒಂದು ಹಬ್ಬದ ದಿನ ಬರುತ್ತದೆ. ಆ ದಿನಕ್ಕೆ ನಾವು ಭಲ್ಲೂಕ ಪರ್ವತದ ಹತ್ತಿರ ಇದ್ದುಬಿಡಬೇಕು. ಇಗೋ ನೋಡು ನಮ್ಮ ವಾಹನಗಳನ್ನು" ಎನ್ನುತ್ತಾ ಪದ್ಮಪಾದನು ಒಂದು ಚಿಟಿಕೆ ಮಣ್ಣು ತೆಗೆದು ಏನೋ ಮಂತ್ರಿಸಿ ನೆಲಕ್ಕೆ ಚೆಲ್ಲಿದ.

ಮರುಕ್ಷಣವಲ್ಲಿ ಛಟಪಟನೆ ಶಬ್ದ ಮಾಡುತ್ತ ಭೂಮಿ ಒಡೆಯಿತು. ಅದರೊಳಗಿಂದ ತಲೆಯನ್ನು ಮೇಲೆತ್ತಿಕೊಂಡು ಕರ್ಣಕರ್ಕಶವಾಗಿ ಗಾಂಡ್ರಿಸುತ್ತಾ ಎರಡು ಭಯಂಕರವಾದ ಕತೆಗಳು ಹೊರಕ್ಕೆ ಹಾರಿದುವು.

ಪದ್ಮಪಾದನು ಅವುಗಳಲ್ಲಿ ಒಂದರ ಬೆನ್ನಿನ ಮೇಲೆ ತನ್ನ ಬಳಿಯಿದ್ದ ಸಂಚಿಯನ್ನು ನೇತಾಡ ಕಟ್ಟಿ, ಅದರಮೇಲೆ ಹತ್ತಿ ಕುಳಿತನು. ಪಿಂಗಳನು ಮಾತ್ರ ಭಯಕಂಪಿತನಾಗಿ ಏನು ಮಾಡಲೂ ತೋರದೆ, ಎರಡನೇ ಕತ್ತೆಯನ್ನು ಮಿಕಿಮಿಕಿ ನೋಡುತ್ತಾ ನಿಂತುಬಿಟ್ಟ.

"ಪಿಂಗಳಾ, ಅದು ನಿನ್ನ ವಾಹನ. ಬೇಗ ಹತ್ತಿ ಕುಳಿತುಕೋ. ಹೊರಡೋಣ!" ಎಂದ ಪದ್ಮಪಾದ ನಗುತ್ತಾ.

"ಅಯ್ಯಯ್ಯೋ! ಇವು ಸಾಧಾರಣ ಕತ್ತೆಗಳಲ್ಲ. ಯಾವುದೋ ಪಿಶಾಚಗಳು. ನನಗೆ ಭಯ



"ವಾಗುತ್ತದೆ" ಎಂದ ಪಿಂಗಳ. "ಇವು ಸಾಮಾನ್ಯ ಕತ್ತೆಗಳಲ್ಲವೆಂಬುದು ನಿಜ. ಪಿಶಾಚಿಗಳಾದರೇನಾಯಿತು? ನಾವು ಹೇಳಿದಹಾಗೆ ಕೇಳುವಂಥವು. ವಾಯುವೇಗ ಮನೋವೇಗಗಳಿಂದ ಪ್ರಯಾಣಮಾಡುವಂಥವು. ನೀನೇನೂ ಹೆದರಬೇಡ" ಎಂದ ಪದ್ಮಪಾದ.

ಇದನ್ನು ಕೇಳಿದಮೇಲೆ ಪಿಂಗಳನಿಗೆ ಧೈರ್ಯವಾಯಿತು. ಆತ ನಿರ್ಭಯದಿಂದ ಆ ಕತ್ತೆಯ ಮೇಲೆ ಹತ್ತಿ ಕುಳಿತುಕೊಂಡ. ಮರುಕ್ಷಣವೇ ಆ ಕತ್ತೆಗಳೆರಡೂ ಗಟ್ಟಿಯಾಗಿ ಗಾಂಡ್ರಿಸುತ್ತಾ ಸ್ವಲ್ಪಹೊತ್ತು ಗಾಳಿಯಲ್ಲಿಯೂ, ಸ್ವಲ್ಪಹೊತ್ತು ಭೂಮಿಯಲ್ಲಿಯೂ ಅಪಾರವಾದ ವೇಗದಿಂದ ಓಡಿದುವು. ಕತ್ತಲಾಗುವ ವೇಳೆಗೆಲ್ಲಾ ಅವರೊಂದು ಅಡವೀಪ್ರಾಂತವನ್ನು ಸೇರಿದರು.



ಅಲ್ಲಿ ಮೊದಲು ಪದ್ಮಪಾದನು ಕತ್ತೆಯಮೇಲಿನಿಂದ ಇಳಿಯುತ್ತಾ, "ಪಿಂಗಳಾ, ಈ ಸ್ಥಳ ಚೆನ್ನಾಗಿದೆ. ಈ ರಾತ್ರಿ ನಾವಿಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳೋಣ. ಉಳಿದ ಪ್ರಯಾಣವನ್ನು ನಾಳೆ ಸಾಯಂಕಾಲದೊಳಗೆ ಮುಗಿಸಬಹುದು" ಎಂದ. ತುಂಬಾ ದಣಿದುಹೋದ ಪಿಂಗಳನು ಅದಕ್ಕೆ ಸರಿಯೆಂದ.

ಅಲ್ಲಿದ್ದ ಹಸಿರು ಹುಲ್ಲಿನ ಹಾಸಿಗೆಯಲ್ಲಿ ಸ್ವಲ್ಪ ವಿಶ್ರಾಂತಿ ಪಡೆದಮೇಲೆ ಪಿಂಗಳನಿಗೆ ಸ್ನಾನಮಾಡಬೇಕೆಂದು ತೋರಿತು. ಆದರೆ ಆ ಪ್ರಾಂತದಲ್ಲೆಲ್ಲಿಯೂ ನೀರು ಕಾಣಿಸಲಿಲ್ಲ. ಆತ ಅತ್ತಿತ್ತ ನೋಡುತ್ತಾ ತನ್ನ ಕೋರಿಕೆ ಪದ್ಮಪಾದನಿಗೆ ತಿಳಿಸಿದ.

ಪದ್ಮಪಾದ ಒಂದುಕಡೆಗೆ ಬೆರಳು ತೋರಿಸಿ, "ಅಲ್ಲಿ ಅಡವಿಯೊಳಗೆ ಒಂದು ಕೊಳವುಂಟು. ಹೋಗು. ನೀನು ಅಲ್ಲಿ ಯಾರನ್ನು ಕಂಡರೂ ಭಯಪಡಬೇಕಾಗಿಲ್ಲ" ಎಂದ.

ಪಿಂಗಳನು ಆತ ತೋರಿಸಿದ ಕಾಡಿನೊಳಗೆ ಹೋದ. ಪದ್ಮಪಾದನು 'ಯಾರನ್ನು ಕಂಡರೂ ಭಯಪಡಬೇಡ' ಎಂದು ಏಕೆ ಹೇಳಿದನೋ ಅವನಿಗೆ ಅರ್ಥವಾಗಲಿಲ್ಲ. ಅವನು ಜಾಗರೂಕತೆಯಿಂದ ಮರಗಳ ಬುಡದಲ್ಲಿ ನಡೆಯುತ್ತಾ ಸ್ವಲ್ಪಹೊತ್ತಿಗೆ ಒಂದು ಕೊಳದ ಬದಿಗೆ ತಲಪಿದ. ನಿರ್ಮಲವಾಗಿರುವ ಆ ಕೊಳದ ನೀರು ಅವನಿಗೆ ಬಹಳ ಆನಂದವುಂಟುಮಾಡಿತು. ಆತನು ಉತ್ಸಾಹದಿಂದ ಆ ಕೊಳದಲ್ಲಿಳಿಯಲಿಕ್ಕಿದ್ದ. ಅಷ್ಟರಲ್ಲಿ ಆ ಪ್ರದೇಶವೆಲ್ಲಾ ದದ್ದರಿಸಿ





ಹೋಗುವಹಾಗೆ ಒಂದು ಭೀಕರ ಸ್ವರವು ಕೇಳಿತು: "ನನ್ನನ್ನು ಬಿಡಿಸಿರೀ! ನಿಮಗೆ ಸಹಾಯಮಾಡುತ್ತೇನೇ! ನನ್ನ...."

ಪಿಂಗಳನು ಆ ಸ್ವರವನ್ನು ಕೇಳಿ ನಡುಗಿದ. ಅವನ ದೃಷ್ಟಿ ಆ ಧ್ವನಿ ಬರುವ ದಿಕ್ಕಿಗೆ ಹರಿಯಿತು. ಕೊಳದ ದಡದಲ್ಲೇ ಒಂದುಕಡೆ, ಎರಡು ದೊಡ್ಡ ಬಂಡೆಕಲ್ಲುಗಳಿಗೆ ಸಂಕಲೆಯಿಂದ ಬಂಧಿಸಲ್ಪಟ್ಟ ಒಂದು ವಿಕೃತಾಕಾರವು ಅವನಿಗೆ ಕಾಣಿಸಿತು. ಪಿಂಗಳ ಕಂಗಾಲಾಗಿ, ಒಂದು ಕ್ಷಣದೊಳಗೆ ಹಿಂದಿರುಗಿ ಓಡಬೇಕೆಂದು ನೆನೆದರೂ ಕಾಲೇ ಬರಲಿಲ್ಲ. ಅಷ್ಟರಲ್ಲಿ ಆ ವಿಕೃತಾಕಾರನು ಕಲ್ಲುಗಳಿಗೆ ಕಟ್ಟಿರುವುದನ್ನು ತಿಳಿದು ಇದ್ದಲ್ಲೇ ಮರದಹಾಗೆ ನಿಂತುಬಿಟ್ಟ.

"ಪ್ರಭೂ! ಸ್ವಾಮಿ! ನನ್ನ ಕೈಗಳಿಗಿರುವ ಈ ಸಂಕಲೆಯನ್ನು ಒಡೆದುಹಾಕಿ ನನ್ನನ್ನು ಕಾಪಾಡಿ! ನಾನು ನಿಮಗೆ ಯಾವ ಸಹಾಯವಾದರೂ ಮಾಡುತ್ತೇನೆ" ಎನ್ನುತ್ತಾ ಆ ವಿಕೃತಾಕಾರನು ಪಿಂಗಳನ ಕಡೆಗೆ ದೀನನಾಗಿ ನೋಡುತ್ತಾ ಕೂಗಿಕೊಂಡ.

ಆಷ್ಟು ಹೊತ್ತಿಗೆ ಪಿಂಗಳನಿಗೆ ಒಳ್ಳೆಯ ಧೈರ್ಯವುಂಟಾಯಿತು. ಅವನು ಅಡಿಮೇಲಡಿಯಿಡುತ್ತಾ ಮೆಲ್ಲನೆ ಆ ವಿಕೃತಾಕಾರನ ಬಳಿಗೆ ಹೋದ. ಸಮೀಪದಲ್ಲಿ ನೋಡಿದಾಗ ಆ ವಿಕೃತಾಕಾರನು ಇನ್ನಷ್ಟು ಭಯಂಕರನಾಗಿ ಕಾಣಿಸಿದ. ತಾಳೀಮರದ ಬೊಡ್ಡೆಯಹಾಗಿರುವ ಕಾಲುಗಳೂ, ಜಡೆಯ ಪೊದರುಗಳಹಾಗೆ ಮೈ ತುಂಬಾ ತುಂಬಿರುವ ರೋಮವೂ, ಆನೆಯ ಕಿವಿಗಳೂ, ಕೆಂಡಕಾರುವ ಕಣ್ಣುಗಳೂ—ಅಯ್ಯೋ! ಪಿಂಗಳನು ಭಯದಿಂದ ಕಂಪಿಸಿದ.

"ಸ್ವಾಮಿ, ನನ್ನನ್ನು ಕಾಪಾಡಿ. ನಿಮಗೆ ಎಂಥಾ ಸಹಾಯವನ್ನಾದರೂ ಮಾಡಬಲ್ಲೆ. ಈ ಮೂರು ಲೋಕಗಳಲ್ಲಿ ಎಲ್ಲಿಗಾದರೂ ಸರಿ, ನಿಮ್ಮನ್ನು ನನ್ನ ಭುಜಸ್ಕಂದಗಳಮೇಲೆ ಹೊತ್ತುಕೊಂಡು ಹೋಗಬಲ್ಲೆ" ಎಂದ ವಿಕೃತಾಕಾರ.

ಪಿಂಗಳನು ಆ ಮಾತಿಗೆ ನಕ್ಕು, "ಮೂರು ಲೋಕಕ್ಕೇನು, ಹದಿನಾಲ್ಕು ಲೋಕಗಳಿಗೂ ನನ್ನನ್ನು ಹೊತ್ತುಕೊಂಡು ಹೋಗಬಲ್ಲ ಕತ್ತೆಯೊಂದು ನನಗಿದೆ. ನಿನ್ನನ್ನು ನೋಡಿದರೆ ಆ ಕತ್ತೆಗಿಂತಲೂ ಬಲಶಾಲಿಯಾಗಿ ಕಾಣುತ್ತಿ. ಬುದ್ಧಿಯುಳ್ಳವನಾಗಿಯೂ ಕಾಣಿಸುವಿ. ನಿನ್ನ ಹೆಸರೇನು?" ಎಂದು ಕೇಳಿದ.

"ನನ್ನ ಹೆಸರು ಭಲ್ಲೂಕಕೇತು" ಎಂದ ವಿಕೃತಾಕಾರ ವಿನಯದಿಂದ.

"ಇಲ್ಲಿಗೆ ಸಮೀಪದಲ್ಲಿರುವ ಭಲ್ಲೂಕ ಪರ್ವತದ ಸಂಗತಿ ನಿನಗೆ ಗೊತ್ತೊ?" ಎಂದು ಕೇಳಿದ ಪಿಂಗಳ.

"ಭಲ್ಲೂಕಪರ್ವತದ ಸಂಗತಿಯೊ?" ಎಂದು ಭಲ್ಲೂಕಕೇತು ವಿಕೃತವಾಗಿ ನಕ್ಕು "ನಾನು "ಒಂದು ಕಾಲದಲ್ಲಿ ಆ ಭಲ್ಲೂಕಪರ್ವತಕೆ ಅಧಿಪತಿಯಾಗಿದ್ದೆ. ಒಬ್ಬ ಮಾಂತ್ರಿಕನ ಮೂಲಕವಾಗಿ ನನಗೆ ಈ ದುರವಸ್ಥೆ ತಟ್ಟಿತು. ನೀವೀಗ ನನಗೆ ಬಂಧವಿಮುಕ್ತ ಮಾಡಿದರೆ ಆ ಪರ್ವತದಲ್ಲಿರುವ ಸರ್ವಸಂಪತ್ತುಗಳೂ ನಿಮಗೆ ಸಿಕ್ಕುವ ಹಾಗೆ ಮಾಡುತ್ತೇನೆ" ಎಂದ ಭಲ್ಲೂಕಕೇತು.

ಭಲ್ಲೂಕಕೇತು ಹಾಗೆ ಹೇಳುತ್ತಲೇ ಪಿಂಗಳನಿಗೆ ಎಲ್ಲಿಲ್ಲದ ಆಶೆಯುಂಟಾಯಿತು. ಭಲ್ಲೂಕಕೇತುವಿನ ಸಹಾಯದಿಂದ ತಾನು ಭಲ್ಲೂಕ ಪರ್ವತದಲ್ಲಿರುವ ನಿಧಿನಿಕ್ಷೇಪಗಳನ್ನೆಲ್ಲಾ ವಶಪಡಿಸಿಕೊಳ್ಳಬಹುದೆಂದು ಭಾವಿಸಿದ. ಬೇಕಾದರೆ ಅದರಲ್ಲಿ ಪದ್ಮಪಾದನಿಗೆಕೂಡಾ ಒಂದಿಷ್ಟು ಪಾಲು ಕೊಡಬಹುದು.

"ಹಾಗಾದರೆ ನಿನ್ನನ್ನು ಈ ಸಂಕಲೆಯೊಳಗಿಂದ ಬಿಡಿಸುತ್ತೇನೆ. ಆದರೆ ಆಮೇಲೆ ನೀನು ನನಗೆ ಹಾನಿ ಮಾಡುವುದಿಲ್ಲವೆಂಬ ನಂಬುಗೆಯೇನು?" ಎಂದು ಪ್ರಶ್ನಿಸಿದ ಪಿಂಗಳ.

ಭಲ್ಲೂಕಕೇತು ಪಿಂಗಳನಕಡೆಗೆ ಆಶೆಯಿಂದ ನೋಡುತ್ತಾ, "ಸ್ವಾಮಿ, ಆಡಿದ ಮಾತು ತಪ್ಪಿದರೆ ನನ್ನ ತಲೆ ಒಡೆದುಹೋಗುತ್ತದೆಂದು ನನಗೆ ಶಾಪವಿದೆ. ನಿಮಗೆ ಹಾನಿಮಾಡುವುದಿಲ್ಲವೆಂದು ಮಾತುಕೊಟ್ಟಮೇಲೆ, ಸಾಯಬೇಕೆಂದಿದ್ದರೇನೇ ಮಾತುತಪ್ಪಿಯೇನು. ನಂಬಿರಿ ಸ್ವಾಮಿ" ಎಂದ. ಪಿಂಗಳನಿಗೆ ಭಲ್ಲೂಕಕೇತುವಿನ ಮಾತಿನಲ್ಲಿ ನಂಬುಗೆಯುಂಟಾಯಿತು.

ಅವನು ಕೊಳದ ಬದಿಯಲ್ಲಿರುವ ಒಂದು ಬಂಡೆಗಲ್ಲನ್ನು ತೆಗೆದು ಕೊಂಡು ಭಲ್ಲೂಕಕೇತುವಿನ ಕೈಗಳಿಗಿರುವ ಕಬ್ಬಿಣದ ಸಂಕಲೆಯನ್ನು ಒಡೆದುಹಾಕಲು ಅವನ ಬಳಿಗೆ ಹೋದ.

ಅಷ್ಟರಲ್ಲಿ ಹಿಂದಿನಿಂದ ಪದ್ಮಪಾದನು "ಪಿಂಗಳಾ! ನಿಲ್ಲು!" ಎಂದು ಗಟ್ಟಿಯಾಗಿ ಕೂಗಿದ. ಆ ಕೂಗಿಗೆ ಪಿಂಗಳ ಹೆದರಿಬಿದ್ದು ಹಿಂದಿರುಗಿ ನೋಡಿದ. (ಇನ್ನೂ ಇದೆ)



# ಪ್ರಾಣ ಪಡೆದ ಪ್ರತಿಮೆ

ಪಟ್ಟು ಬಿಡದ ತ್ರಿವಿಕ್ರಮನು ಆ ಮರದ ಬಳಿಗೆ ಹೋಗಿ ಶವವನ್ನಿಳಿಸಿ ಭುಜದಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಹೊರಟನು. ಆಗ ಶವದಲ್ಲಿದ್ದ ಬೇತಾಳ—"ರಾಜಾ, ನೀನು ಕೀರ್ತಿಗಾಗಿ ಎಷ್ಟೋ ಶ್ರಮ ಪಡತ್ತಿಯಾದರೂ ಜೀವನದಲ್ಲಿ ಕೀರ್ತಿಗಿಂತಲೂ ಆನಂದವೇ ಮುಖ್ಯವಾದ್ದು. ಹಿಂದೆ ಮಯನು ಏನು ಮಾಡಿದನೆಂದು ನಿನಗೆ ಗೊತ್ತಿಲ್ಲವೆಂದು ಕಾಣುತ್ತೆ. ಈಗ ನಿನಗೆ ಅವನ ವಿಚಿತ್ರ ಕಥೆ ಹೇಳುತ್ತೇನೆ ಕೇಳು" ಎಂದು ಹೀಗೆಂದು ಹೇಳ ತೊಡಗಿತು:

ದೇವತೆಗಳ ಶಿಲ್ಪಿ ವಿಶ್ವಕರ್ಮ. ರಾಕ್ಷಸರ ಶಿಲ್ಪಿ ಮಯ. ಇಬ್ಬರೂ ದೊಡ್ಡ ಶಿಲ್ಪಿಗಳು. ಆ ಇಬ್ಬರಲ್ಲಿ ಮಯನೇ ಹೆಚ್ಚಿನವ. ಆದರೆ ಆತ ರಾಕ್ಷಸರ ಶಿಲ್ಪಿಯಾದುದರಿಂದ ಅವನನ್ನು ದೇವತೆಗಳು ಮೆಚ್ಚುತಿರಲಿಲ್ಲ. ವಿಶ್ವಕರ್ಮನೇ ದೊಡ್ಡ ಶಿಲ್ಪಿ ಎಂದುಕೊಳ್ಳುತ್ತಿದ್ದರು.

ಬೇತಾಳ ಕಥೆಗಳು



ಮಯನು ಶಿಲ್ಪದಲ್ಲಿ ಎಷ್ಟು ದೊಡ್ಡವನೋ ಗುಣದಲ್ಲಿಯೂ ಅಷ್ಟು ದೊಡ್ಡವ. ತನ್ನನ್ನು ದೇವತೆಗಳು ಮೆಚ್ಚಿಕೊಳ್ಳಲಿಲ್ಲವೆಂದು ಅವನು ವ್ಯಸನಪಡುತ್ತಿರಲಿಲ್ಲ.

ಆದರೆ ಉಳಿದ ರಾಕ್ಷಸರು ಮಯನ ಹತ್ತಿರ ಹೋಗಿ "ನಿನಗಿಷ್ಟಾದರೂ ಪೌರುಷವಿಲ್ಲವೆ? ವಿಶ್ವಕರ್ಮನು ನಿನ್ನ ಕಾಲ ಉಂಗುಷ್ಠಕ್ಕೂ ಸರಿಬರುವವನಲ್ಲ; ಹಾಗಿರುವಾಗ ವಿಶ್ವಕರ್ಮನೇ ದೊಡ್ಡ ಶಿಲ್ಪಿ ಎಂದರೆ ನೀನು ಪೌರುಷವಿಲ್ಲದೆ ನೋಡುತ್ತಾ ಸುಮ್ಮನಿರುವಿಯಾ?" ಎಂದರು.

ಮಯನು ನಕ್ಕು "ನಾನು ಎಂತಹ ಶಿಲ್ಪಿ ಎಂದು ದೇವತೆಗಳಿಗೆ ಗೊತ್ತಿಲ್ಲವೆ? ಸಾಳ್ವನಿಗಾಗಿ ಶಿವನು ಆಜ್ಞಾಪಿಸಿದಾಗ ನಾನು ಗಾಳಿಯಲ್ಲಿ ಹಾರುವ ಸೌಭಕ ನಗರವನ್ನು ನಿರ್ಮಿಸಲಿಲ್ಲವೆ? ಪಾಂಡವರಿಗಾಗಿ ನಾನು ನಿರ್ಮಿಸಿದ ಸಭೆಯನ್ನು ನೋಡಿದ್ದಿರಷ್ಟೆ?" ಎಂದ.

"ವಿಶ್ವಕರ್ಮ ಮಾತ್ರ ಸಾಮಾನ್ಯನೆ? ಸ್ವರ್ಗವನ್ನೆಲ್ಲಾ ಅವನೇ ಕಟ್ಟಿದ. ಸೂರ್ಯನನ್ನು ಸಾಣೆಹಿಡಿದು ಆಗ ಬಂದ ಚೂರ್ಣದಿಂದ ವಿಷ್ಣುವಿಗೆ ಚಕ್ರ ಮಾಡಿ ಕೊಟ್ಟ. ಪಾಂಡವರಿಗೆ ಇಂದಪ್ರಸ್ಥ ನಗರವನ್ನು ನಿರ್ಮಿಸಿದ. ಈಗ ಆ ಹಳೆಯ ವಿಷಯವೇಕೆ? ನಿನಗೂ ವಿಶ್ವಕರ್ಮನಿಗೂ ಒಂದು ಸ್ಪರ್ಧೆ ಏರ್ಪಡಿಸುವ. ಅದರಲ್ಲಿ ನೀನು ವಿಶ್ವಕರ್ಮನನ್ನು ಸೋಲಿಸಬೇಕು! ಆಗ ಖಂಡಿತವಾಗಿ ನಿನ್ನ ಘನತೆಯನ್ನು ಎಲ್ಲರೂ ಗುರ್ತಿಸುವರು" ಎಂದು ರಾಕ್ಷಸರು ಮಯನಿಗೆ ಒತ್ತಾಯಮಾಡಿದರು.

"ಸರಿ, ಏರ್ಪಾಡು ಮಾಡಿ" ಎಂದು ಮಯ ಇದಕ್ಕೆ ಒಪ್ಪಿಕೊಂಡ.

ರಾಕ್ಷಸರು ದೇವತೆಗಳ ಬಳಿಗೆ ಹೋಗಿ, "ನಿಮ್ಮ ವಿಶ್ವಕರ್ಮನಿಗೂ ನಮ್ಮ ಮಯನಿಗೂ ಸ್ಪರ್ಧೆ ಏರ್ಪಡಿಸಿದ್ದೇವೆ. ಇಬ್ಬರಲ್ಲಿಯೂ ಯಾರು ದೊಡ್ಡ ಶಿಲ್ಪಿ ಎಂದು ತಿಳಿದುಹೋಗುತ್ತೆ. ವೃಥಾ ಮಾತೇಕೆ?" ಎಂದರು.

ದೇವತೆಗಳು ತಮ್ಮೊಳಗೆ ತಾವು ಗುಸಗುಸಲಾಡಿಕೊಂಡು ವಿಶ್ವಕರ್ಮನಿಗೆ ಈ ವಿಷಯವನ್ನು ಹೇಳಿದರು.

"ನಾನು ಬೃಹಸ್ಪತಿಗೆ ಬಾವ; ಸೂರ್ಯನಿಗೆ ಮಾವ. ಈ ರಾಕ್ಷಸ ಶಿಲ್ಪಿಯೊಂದಿಗೆ ಸ್ಪರ್ಧಿಸಲು ಹೆದರುವೆನೆ?" ಎಂದ ಒಳ್ಳೆಯ ಗರ್ವದಿಂದ ವಿಶ್ವಕರ್ಮ.

ದೇವತೆಗಳು ಮಯನನ್ನು ಕರೆಸಿ "ನಿನಗೂ ವಿಶ್ವಕರ್ಮನಿಗೂ ಸ್ಪರ್ಧೆ ಏರ್ಪಾಡು ಮಾಡುತ್ತೇವೆ. ನೀನು ಎಂತಹ ಮಹತ್ವವುಳ್ಳ ವಸ್ತುವನ್ನು ನಿರ್ಮಿಸುತ್ತೀಯೋ ಹೇಳು. ಅಂತಹುದೇ ವಿಶ್ವಕರ್ಮನೂ ನಿರ್ಮಿಸಲಿ" ಎಂದರು.

"ಮಹಿಮೆಗೇನು? ಎಲ್ಲರ ಮಹಿಮೆ ಎಲ್ಲರಿಗೂ ಗೊತ್ತು. ನಾನು ಮೂರು ಲೋಕದಲ್ಲಿಯೂ ಇಲ್ಲದ ಸುಂದರಿಯನ್ನು ಬಂಗಾರು ಪ್ರತಿಮೆಯಾಗಿ ತಯಾರಿಸಬೇಕೆಂದಿದ್ದೇನೆ. ನನ್ನ ಶಿಲ್ಪದ ಸೌಂದರ್ಯವನ್ನು ಅಳೆಯಲಿಕ್ಕೆ ಅವರೂ ಇವರೂ ಏಕೆ? ಸೃಷ್ಟಿಕರ್ತನಾದ ಬ್ರಹ್ಮನನ್ನೇ ಏರ್ಪಡಿಸಿಬಿಡಿ" ಎಂದ ಮಯ.

ಇದಕ್ಕೆ ಸಂತೋಷದಿಂದ ಒಪ್ಪಿಕೊಂಡು ದೇವತೆಗಳು ಹೊರಟು ಹೋದರು.

ಬೇಗದಲ್ಲೇ ಮಯನು ಒಂದು ಅದ್ಭುತವಾದ ಸ್ತ್ರೀ ರೂಪವನ್ನು ಮನುಷ್ಯ ಪ್ರಮಾಣದ ಬಂಗಾರದ ವಿಗ್ರಹವಾಗಿ ನಿರ್ಮಿಸಿದನು. ದೇವತೆಗಳೆಲ್ಲಾ ಬಂದು ಅದನ್ನು ಕಂಡು ಅತ್ಯಾಶ್ಚರ್ಯಪಟ್ಟರು.

ವಿಶ್ವಕರ್ಮನಿಗೆ ಕೈ ಕಾಲೇ ಆಡಲಿಲ್ಲ. ಆತ ಬ್ರಹ್ಮನಬಳಿಗೆ ಹೋಗಿ "ತಾತಾ, ಈ ಮಯನು ನಿನಗೆ ಬಲು ದೊಡ್ಡ ಅವಮಾನ ಮಾಡುತ್ತಿದ್ದಾನೆ. ಮೂರು ಲೋಕದಲ್ಲಿಯೂ ಇಲ್ಲದ ಸೌಂದರ್ಯವತಿಯನ್ನು ಸೃಷ್ಟಿಸಿಬಿಟ್ಟ. ಸೃಷ್ಟಿಕರ್ತನಾದ ನೀನುಕೂಡಾ ಅಂತಹ ಸುಂದರಿಯನ್ನು ಸೃಷ್ಟಿಸಲಿಲ್ಲವೆಂದು ರುಜುಪಡಿಸಲಿಕ್ಕಾಗಿಯೇ ಅವನು ಈ ಕೆಲಸ ಮಾಡಿದ. ಆ ವಿಗ್ರಹ ಲೋಕದಲ್ಲಿರುವಷ್ಟು ಕಾಲವೂ ಮಯನ ಕೀರ್ತಿ



ಶಾಶ್ವತವಾಗಿರುತ್ತೆ. ಅಷ್ಟು ಕಾಲವೂ ನಿನಗೂ ನನಗೂ ಕೂಡಿಯೇ ಅಪಕೀರ್ತಿ ತಪ್ಪದು, ಇದಕ್ಕಿಂತ ಬೇರೇನು ಬೇಕು?" ಎಂವ.

ಉಳಿದ ದೇವತೆಗಳೂ ಬ್ರಹ್ಮನ ಬಳಿಗೆ ಹೋಗಿ,"ಓ! ಸ್ವಾಮಿ! ನೀವೇ ಹೇಗಾದರೂ ಮಾಡಿ ಈ ಸ್ಪರ್ಧೆಗೆ ಭಂಗತರಬೇಕು. ಇಲ್ಲದಿದ್ದರೆ ನಮ್ಮ ವಿಶ್ವಕರ್ಮನಿಗೆ ಅಪಕೀರ್ತಿಯೂ ಅಪಜಯವೂ ಖಂಡಿತ" ಎಂದು ಉಪಾಯಗಾಣದೆ ಬೇಡಿಕೊಂಡರು.

ಮಯನು ಸೃಷ್ಟಿಸಿದ ಹೇಮ ವಿಗ್ರಹವನ್ನು ನೋಡಲಿಕ್ಕೆ ಬ್ರಹ್ಮದೇವನೇ ಸ್ವತಹ ಹೊರಟು ಬಂದ. ವಿಗ್ರಹವನ್ನು ನೋಡಿ ದೇವತೆಗಳು ಅಂದ ಮಾತಿನಲ್ಲಿ ಅತಿಶಯೋಕ್ತಿಯೇನೂ ಇಲ್ಲವೆಂದು ಬ್ರಹ್ಮನಿಗೇ ತೋರಿತು.

ಬ್ರಹ್ಮ ಮಯನಿಗೆಂದ: "ಅಪ್ಪಾ, ನೀನು ಚಿಕ್ಕವನಾದರೂ ಈ ಹೇಮ ವಿಗ್ರಹವನ್ನು ಅದ್ಭುತವಾಗಿ ನಿರ್ಮಿಸಿಬಿಟ್ಟಿರುವಿ. ಆದರೆ ನನಗೆ ಒಂದು ವಿಚಾರವಾಗಿದೆ. ನಾನು ಎಂದಿಗೂ ಪ್ರಾಣವಿಲ್ಲದ ಪ್ರತಿಮೆಯನ್ನು ಸೃಷ್ಟಿಸಿದವನೇ ಅಲ್ಲ. ಈ ವಿಗ್ರಹವನ್ನು ನೋಡುವಾಗ ಇದಕ್ಕೆ ಪ್ರಾಣವಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತೋ ಅನಿಸುತ್ತದೆ. ವಿಶ್ವಕರ್ಮನಿಗಿಂತಲೂ ದೊಡ್ಡ ಶಿಲ್ಪಿ ಅನಿಸಿಕೊಳ್ಳಲಿಕ್ಕೆ ಈ ವಿಗ್ರಹವನ್ನೇಕೆ ವ್ಯರ್ಥ ಮಾಡಿಕೊಳ್ಳುತ್ತಿ? ನಾನು ಇದಕ್ಕೆ ಪ್ರಾಣ ಕೊಡುತ್ತೇನೆ. ಇದು ನಿನಗೆ ಯಾವಜ್ಜೀವವೂ ಹೆಂಡತಿಯಾಗಿರುತ್ತದೆ. ನಿನಗೆ ಅದಕ್ಕಿಂತ ಬೇಕಾದ್ದೇನಿದೆ?" ಇದನ್ನು ಕೇಳಿ ಮಯನು ಸ್ವಲ್ಪ ಹೊತ್ತು ಆಲೋಚನೆಮಾಡಿ, ಬಳಿಕ ಕೈ ಮುಗಿದು ತಲೆದೂಗಿ "ದೇವಾ, ಹಾಗೇ ಮಾಡಿ. ನಾನು ವಿಶ್ವಕರ್ಮನಿಗೆ ಸೋತೆನೆಂದು ಒಪ್ಪುತ್ತೇನೆ" ಎಂದ.

ದೇವತೆಗಳ ಆನಂದಕ್ಕೆ ಮೇರೆ ಇರಲಿಲ್ಲ. ಬ್ರಹ್ಮದೇವ ಹೇಮ ವಿಗ್ರಹಕ್ಕೆ ಪ್ರಾಣವಿತ್ತು ಅವಳಿಗೆ 'ಹೇಮ' ಎಂದು ನಾಮಕರಣ ಕೂಡಾ ಮಾಡಿದ. ಆ ಕೂಡಲೇ ಅವಳಿಗೆ ಮಯನೊಂದಿಗೆ ವಿವಾಹವೂ ಆಗಿಹೋಯಿತು. ಬ್ರಹ್ಮನೂ ಮಿಕ್ಕ ದೇವತೆಗಳೂ ಸಮಾಧಾನದಿಂದ ಉಸಿರು ಬಿಡುತ್ತಾ ಹೊರಟುಹೋದರು.

"ಇನ್ನು ಮೇಲೆ ಹೇಮಳ ಸೌಂದರ್ಯವನ್ನು ಕುರಿತು ನೀವು ಚಿಂತೆಮಾಡುವ ಅಗತ್ಯವಿಲ್ಲ. ಅವಳಿಗೆ ಶರೀರ ಧರ್ಮಗಳೆಲ್ಲಾ ಏರ್ಪಟ್ಟುಬಿಟ್ಟುವು. ಕಾಲಕ್ರಮದಲ್ಲಿ ಅವಳಿಗೆ ಮಕ್ಕಳಾಗು



ತ್ತವೆ. ರೋಗ, ರುಜನೆ, ವಾರ್ಧಕ್ಯ ಎಲ್ಲಾ ಬರುತ್ತವೆ. ಕಡೆಗೆ ಸತ್ತೂ ಹೋಗುತ್ತಾಳೆ. ಮಯನ ಶಿಲ್ಪ ಈ ವಿಧವಾಗಿ ಮಣ್ಣುಗೂಡಿ ಹೋಗುತ್ತದೆ!" ಎಂದು ಬ್ರಹ್ಮ ದೇವತೆಗಳೊಂದಿಗೆ ಹೇಳಿದ.

ಬ್ರಹ್ಮನು ಹೇಳಿದ ಹಾಗೆಯೇ ಪ್ರತಿಯೊಂದೂ ನಡೆಯಿತು. ಹೇಮ ಸ್ವಲ್ಪ ಕಾಲ ಮಯನೊಂದಿಗೆ ಸಂಸಾರ ಮಾಡಿ, ಮಂಡೋದರಿ, ಮಾಯಾವಿ, ದುಂದುಭಿ ಎಂಬ ಮಕ್ಕಳನ್ನು ಹೆತ್ತಳು. ಅವಳ ಶರೀರವು ವಯಸ್ಸಿನೊಂದಿಗೆ ಸಿರಿಗೆಬೀಳ ತೊಡಗಿತು. ಹಿಂದೆ ಅವಳ ಸೌಂದರ್ಯವನ್ನು ಕುರಿತು ದೊಡ್ಡದಾಗಿ ಹೇಳುತ್ತಿದ್ದ ರಾಕ್ಷಸರೇ ಈಗ ಅವಳನ್ನು ಕುರಿತು ಮಾತಾಡುವುದನ್ನು ಬಿಟ್ಟರು. ಈಗ ಅವಳೊಬ್ಬಳು ಸಾಮಾನ್ಯ ಸ್ತ್ರೀ.

ಇಷ್ಟರಲ್ಲಿ ದೇವತೆಗಳು ಬಂದು ಮಯನೊಂದಿಗೆ ಜಗಳಕೆದರಿದರು. "ಹೇಮ ನಮ್ಮ ಕಡೆಯ ಹುಡುಗಿ. ನಮ್ಮ ಬ್ರಹ್ಮತಾನೇ ಅವಳಿಗೆ ಜೀವ ಕೊಟ್ಟ? ನಮ್ಮ ದೇಶದಲ್ಲಾದರೆ ಶರೀರ ಧರ್ಮಗಳಿಗೆ ಅತೀತವಾಗಿದ್ದು ನಿತ್ಯಯೌವನವಾಗಿರುತ್ತಿದ್ದಳು. ನಿನಗೆ ಹೆಂಡತಿಯಾದುದರಿಂದಲೇ ಅಂದವಿಕಾರವಾದಳು ನೋಡು" ಎಂದು ಅವರು ಅವಳನ್ನು ಕರೆದುಕೊಂಡು ಹೋದರು. ಮಯನು ಹೆಚ್ಚು ಪ್ರತಿಭಟನೆ ಮಾಡದೆ ಪತ್ನಿಯನ್ನು ಕಳುಹಿಸಿಬಿಟ್ಟ.

ಹೆಂಡತಿಯಿಂದ ಬಿಡುಗಡೆ ಹೊಂದಿದಮೇಲೆ ಮಯನು ವಿರಕ್ತಿ ತಾಳಿದ. ಮಕ್ಕಳನ್ನು ಕರೆದುಕೊಂಡು ದೇಶಾಟನೆ ಮಾಡುತ್ತಾ ತಿರುಗಿದ. ಹೀಗೆ ತಿರುಗುತ್ತಿರುವ ಸಮಯದಲ್ಲಿಯೇ ಅವ



ನಿಗೆ ರಾವಣನು ಕಾಣಿಸಿದ್ದು. ಅವನಿಗೆ ಮಯನು ತನ್ನ ಕುಮಾರಿ ಮಂಡೋದರಿಯನ್ನಿತ್ತು ವಿವಾಹಮಾಡಿದ. ಅದು ಬೇರೆ ದೊಡ್ಡ ಕಥೆ. ಆ ಕಥೆಯೆಲ್ಲಾ ನಿನಗೆ ಗೊತ್ತಿದೆಯಷ್ಟೆ?

ಬೇತಾಳ ಈ ಕಥೆ ಹೇಳಿ "ರಾಜಾ, ನನಗೊಂದು ಸಂಶಯವಾಗಿದೆ. ಮಯನು ಸಾಟಿಯಿಲ್ಲದ ಶಿಲ್ಪಿಯಾಗಿದ್ದೂ ವಿಶ್ವಕರ್ಮನನ್ನು ಸ್ಪರ್ಧೆಯಲ್ಲಿ ಏತಕ್ಕೆ ಸೋಲಿಸಿ ಶಾಶ್ವತ ಕೀರ್ತಿಗಳಿಸಲಿಲ್ಲ? ಬ್ರಹ್ಮನು ತನ್ನ ವಿಗ್ರಹದಲ್ಲಿ ಶಾಶ್ವತವಾಗಿ ನಿಂತಿರಬೇಕಾದ ಸೌಂದರ್ಯವನ್ನು ಮಾರ್ಪಡಿಸುವೆನೆಂದುದಕ್ಕೆ ಏಕೆ ಒಪ್ಪಿದ? ಕೀರ್ತಿ ಕಾಂಕ್ಷೆಯಿಲ್ಲದೆಯೊ? ಅಲ್ಲ ಅಷ್ಟು ಸುಂದರಿ ತನಗೆ ಹೆಂಡತಿಯಾದರೆ ಅಷ್ಟೇ ಸಾಕೆಂದೋ? ಇದಕ್ಕೆ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಿಡಿದು, ಸಾವಿರ ಹೋಳುಗಳಾಗಿ ಹೋಗುತ್ತದೆ" ಎಂದಿತು.

"ಬ್ರಹ್ಮದೇವನು ಹೇಮಳಿಗೆ ಪ್ರಾಣವಿತ್ತಾಗಲೇ ಮಯನು ವಿಜಯವನ್ನು ಸಾಧಿಸಿಬಿಟ್ಟ. ಹೇಗೆಂದರೆ ಮನುಷ್ಯನು ಮಾಡಿದ ಶಿಲ್ಪಗಳಿಗೆ ಅದಕ್ಕೆ ಮೊದಲಾಗಲೀ, ಆಮೇಲಾಗಲೀ ಬ್ರಹ್ಮನು ಬಂದು ಪ್ರಾಣ ಕೊಟ್ಟುದೇ ಇಲ್ಲ. ಅದಲ್ಲದೆ ಶಿಲ್ಪದಲ್ಲಿರುವ ಸೌಂದರ್ಯವು ಶಾಶ್ವತವೆಂದುಕೊಳ್ಳುವುದೂ ತಪ್ಪಾಗಿದೆ. ವಿಶ್ವಕರ್ಮ ನಿರ್ಮಿಸಿದ ನಗರಗಳೂ, ಮಯನು ನಿರ್ಮಿಸಿದ ನಗರಗಳೂ ಈಗಿವೆಯೆ? ಅವೆಂದೋ ನಾಶವಾಗಿ ಹೋದುವು. ಆದರೆ ಸೌಂದರ್ಯವು ನಾಶವಿಲ್ಲದ್ದು. ಮಯನು ಕಡೆದ ಹೇಮ ವಿಗ್ರಹಕ್ಕೆ ಪ್ರಾಣವಿತ್ತು ಬ್ರಹ್ಮದೇವನೇ ಆ ವಿಗ್ರಹದ ಸೌಂದರ್ಯವನ್ನು ಶಾಶ್ವತಗೊಳಿಸಿಬಿಟ್ಟ. ಹೇಗೆ ಗೊತ್ತೆ? ಹೇಮಳ ಸೌಂದರ್ಯ ಮಂಡೋದರಿಯಲ್ಲಿಳಿಯಿತು. ಅವಳು ಕೂಡಾ ತ್ರಿಲೋಕ ಸುಂದರಿ. ಈಗಲೂ ಪ್ರತಿ ಸೌಂದರ್ಯವತಿಯಲ್ಲಿಯೂ ಹೇಮಳ ಸೌಂದರ್ಯ ಉಂಟೇ ಉಂಟು. ಇನ್ನು ಮುಂದೆಯೂ ಅದು ಇರುತ್ತದೆ. ಪ್ರಪಂಚವಿರುವಷ್ಟುಕಾಲ ಅದು ನಶಿಸದು. ಇದನ್ನು ತಿಳಿದವನಾದ್ದರಿಂದಲೇ ಮಯನು ಬ್ರಹ್ಮನ ಸಲಹೆಗೆ ಒಪ್ಪಿಕೊಂಡ."

ಈ ವಿಧವಾಗಿ ಅರಸನಿಗೆ ಮೌನಭಂಗವಾಗುತ್ತಲೇ ಬೇತಾಳವು ಶವದೊಂದಿಗೆ ಮಾಯವಾಗಿ ಮತ್ತೆ ಮರವನ್ನೇರಿ ನೇತಾಡಿತು.



## ಕುಶಲ ಚಿತ್ರಕಾರ ★ (ಪದ್ಯಕಥೆ)

ಕೆ. ಎಸ್. ಕಟ್ಟಿ, ಧಾರವಾಡ

ಇದ್ದನೊಬ್ಬ ಮಹಾರಾಜ
ನೊಂದು ರಾಜ್ಯಕೆ ।
ಅವನದೊಂದು ಕಣ್ಣು ಕುರಡು,
ಕುರೂಪಿಯೆನಿಪನು ॥

ಆ ಮಹಾರಾಜ ನೊಬ್ಬ
ಶೀಘ್ರ ಕೋಪಿಯು ।
ಅಲ್ಪ ಮಾತು, ಅಲ್ಪ ಸೇವಕೆ-
ಶಿಕ್ಷೆ ವಿಧಿಸುವ ॥

ಚಿತ್ರಕಾರ ನೊಬ್ಬ ಅವನ
ಸಭೆಯೊಳಿರಲ್ ಅಂದವಾದ ।
ಚಿತ್ರ ಬರೆದು ಆ ಧನಿಯ
ಪ್ರೀತಿ-ಪಾತ್ರನಾಗಿರೆ ॥

ಒಮ್ಮೆ ಆ ಮಹಾರಾಜ
ಚಿತ್ರಕಾರನನ್ನು ಕರೆದು ।
ಅಧಿಕಾರ ದರ್ಪ ವಾಣಿಯಲ್ಲೆ,
ಇಂತು ನುಡಿದನು : ॥

" ಎಲವೊ ಕೇಳು, ನಿನಗೆ ಪೇಳ್ವೆ
ಎನ್ನ ಭಾವ ಚಿತ್ರವನ್ನು ।
ಎಲ್ಲ ನೋಡಿ ಸುಖಿಸುವಂತೆ
ರಚಿಸು ಬೇಗನೆ " ॥

ಇದನು ಕೇಳಿ ಚಿತ್ರಕಾರ,
ಭ್ರಾಂತನಾಗಿ ಮನದಿ ಮಿಡುಕಿ ।
" ಸರಿ ಪ್ರಭೋ " ಎಂದು ಒಪ್ಪಿ,
ಹೊರಟು ಬಂದನು ॥

ಚಿತ್ರಕಾರ ಅಂದಿನಿಂದ
ಅತುಲ ಚಿಂತೆಯಿಂದ ಕೂಡಿ ।
" ಏನು ಮಾಡಲಪ್ಪ ?" ಎಂದು
ಬಳಲುತಿರ್ದನು ॥

" ನೇತ್ರದೋಷ ಚಿತ್ರಕಿರಲು,
ಕಠಿಣ ಶಿಕ್ಷೆ ಎನ್ನ ಬಿಡದು ।
ಕುರುಡು ಕಣ್ಣು ಇಲ್ಲದಿರಲು
ಜನರು ಹಳಿವರು " ॥

ಚಿಂತೆಯಿಂದ ಖಿನ್ನನಾಗಿ,
ಹುಚ್ಚನಂತೆ ಅಲೆಯುತಿರಲು ।
ಬೇಟೆಗಾರ ನೊಬ್ಬ ಅಂದು
ಬೇಟೆಯಾಡ್ತುದನ್ನು ಕಂಡ ॥

" ಇದೇ ಸರಿ !" ಎಂದುಕೊಂಡು
ಬೇಟೆಯಲ್ಲಿ ತೊಡಗಿದಂತೆ ।
ಕುರುಡು ಕಣ್ಣು ಮುಚ್ಚಿದಂತೆ
ರಾಜ-ಚಿತ್ರ ಪೂರ್ತಿಯಾಯ್ತು ॥

ಚಿತ್ರ ನೋಡಿ ರಾಜನಾಗ
ಉಬ್ಬಿ ಉಬ್ಬಿ ನಲಿಯುತಿದ್ದ ।
ಜನರ ಅಪವಾದ ತಪ್ಪಿ,
ಬಡಕಲಾವಿದ ಬದುಕುತಿದ್ದ ! ॥



# ಕುಚುಮಾರ

ಹಿಂದೆ ಕಾಶೀನಗರದಲ್ಲಿ ಕುಚುಮಾರನೆಂಬ ಬ್ರಾಹ್ಮಣಯುವಕನಿದ್ದ. ಆತ ಅರುವತ್ನಾಲ್ಕು ವಿದ್ಯೆಗಳಲ್ಲಿಯೂ ದೊಡ್ಡ ಪಾಂಡಿತ್ಯವನ್ನು ಸಂಪಾದಿಸಿದ. ಆ ಕಾಲದಲ್ಲಿ ಧಾರಾನಗರವನ್ನು ಆಳುತ್ತಿದ್ದ ಭೋಜರಾಜನು ಎಲ್ಲೆಲ್ಲಿರುವ ಪಂಡಿತರನ್ನೆಲ್ಲಾ ಆದರಿಸಿ ಬಹಳವಾಗಿ ಸತ್ಕರಿಸುತಿದ್ದ. ಅಂತೆಯೇ ಕುಚುಮಾರನೂ ಭೋಜನಸಭೆಗೆ ಹೋಗಿ ಸನ್ಮಾನ ಪಡೆಯುವ ಉದ್ದೇಶದಿಂದ ಕಾಲುನಡಿಗೆಯಿಂದ ಧಾರಾನಗರಕ್ಕೆ ಹೊರಟ.

ಹೋಗುವಾಗ ದಾರಿಯಲ್ಲಿ ಒಂದು ಬ್ರಾಹ್ಮಣ ಅಗ್ರಹಾರವು ಸಂಧಿಸಿತು. ಅಲ್ಲಿ ಅವನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಅತಿಥಿಯಾಗಿದ್ದ. ಭೋಜನದ ವೇಳೆಯಲ್ಲಿ ಗೃಹಸ್ಥನು ಕುಚುಮಾರನೊಡನೆ "ಅಯ್ಯಾ, ತಾವೆಲ್ಲಿಂದ ಬರುತ್ತೀರಿ? ಎಲ್ಲಿಗೆ ಹೋಗುತ್ತೀರಿ? ಏನು ಕೆಲಸದಮೇಲೆ ಹೊರಟಿದ್ದೀರಿ?" ಎಂದು ಸಂತೋಷದಿಂದ ವಿಚಾರಿಸಿದ.

"ನಮ್ಮದು ಕಾಶೀನಗರ. ಸನ್ಮಾನ ಪಡೆಯುಲಿಕ್ಕಾಗಿ ಭೋಜರಾಜನ ಆಸ್ಥಾನಕ್ಕೆ ಹೋಗುತಿದ್ದೇನೆ. ಆತ ಮಹಾದಾತಾರನಲ್ಲವೆ? ನಾನು ಎಲ್ಲಾ ಶಾಸ್ತ್ರಗಳನ್ನೂ ಓದಿದ ಪಂಡಿತ" ಎಂದು ಕುಚುಮಾರನು ಉತ್ತರಿಸಿದ.

ಅದಕ್ಕೆ ಗೃಹಸ್ಥ "ನೀವು ನಿಜಕ್ಕೂ ಪಂಡಿತರೇ ಆದರೆ ಕಷ್ಟಪಟ್ಟು ಧಾರಾನರಕ್ಕೆ ಹೋಗುವುದೇಕೆ? ಭೋಜರಾಜನು ಎಷ್ಟು ಕೊಟ್ಟರೂ ಅಗ್ರಹಾರಗಳನ್ನು ಕೊಡಲಾರನಷ್ಟೆ? ನಮ್ಮ ಮಹಾರಾಜನಿಗೆ ಸರಸ್ವತಿ ಎಂಬ ಒಬ್ಬಳೇ ಕುಮಾರಿ. ಅವಳುಕೂಡಾ ಎಲ್ಲಾ ಶಾಸ್ತ್ರಗಳನ್ನೂ ಓದಿದ್ದಾಳೆ. ಪಾಂಡಿತ್ಯದಲ್ಲಿ ತನಗೆ ಸಮಾನನಾದವನನ್ನೆ ಮದುವೆಯಾಗುವೆನೆಂದು ಹಟಹಿಡಿದಿದ್ದಾಳೆ. ಅವಳು ಮಾಡುವ ಪರೀಕ್ಷೆಯಲ್ಲಿ ಗೆದ್ದವನಿಗೆ ಸರಸ್ವತಿಯನ್ನಿತ್ತು ಮದುವೆ ಮಾಡುವುದಲ್ಲದೆ ರಾಜ್ಯಾಭಿಷೇಕವನ್ನೂ ಮಾಡುತ್ತಾರೆ. ದೇಶದೇಶಗಳಿಂದ ಪಂಡಿತರು ತಂಡೋಪತಂಡವಾಗಿ ಬರುತ್ತಿದ್ದಾರೆ. ಒಬ್ಬೊಬ್ಬರೇ ಪರೀಕ್ಷೆಯಲ್ಲಿ ಸೋತುಹೋಗುತ್ತಾರೆ. ನೀನೇಕೆ ಪ್ರಯತ್ನಮಾಡಬಾರದು?" ಎಂದು ಹೇಳಿದ. ರಾಜಕುಮಾರಿ ಮಾಡುವ ಪರೀಕ್ಷೆಗೆ ತಾನು

ಎನ್. ಸದಾನಂದ

ನಿಲ್ಲುತ್ತೇನೆಂದ ಕುಚುಮಾರ. ರಾಜಧಾನಿಯಾದ ಪುರಂದರಪುರ ಆ ಅಗ್ರಹಾರಕ್ಕೆ ಸ್ವಲ್ಪದೂರ ದಲ್ಲಿತ್ತು. ಗ್ರಹಸ್ಥನು ತನ್ನ ಮಗ ಶಂಬರ ನೆಂಬವನನ್ನು ಕುಚುಮಾರನಿಗೆ ಜತೆಮಾಡಿ ಕಳುಹಿಸಿಕೊಟ್ಟ. ಇಬ್ಬರೂ ಕೂಡಿ ರಾಜ ಧಾನಿಗೆ ಹೋದರು.

ಕುಚುಮಾರನು ಆಸ್ಥಾನಕ್ಕೆ ಹೋಗಿ ತನ್ನ ಕುಲ, ಗೋತ್ರ, ಹೆಸರುಗಳನ್ನು ತಿಳಿಸಿ ತಾನು ಸರಸ್ವತಿಯನ್ನು ಮದುವೆಯಾಗಲು ಬಂದವ ನೆಂದು ಹೇಳಿದ. ಅಧಿಕಾರಿಗಳು ಅವನಿಗೊಂದು ಬಿಡದಿಯನ್ನು ತೋರಿಸಿ, ಅವನಿಗೆ ಸಂಬಂಧಿ ಸಿದ ವಿವರಗಳನ್ನು ರಾಜಕುಮಾರಿಗೆ ಹೇಳಿ ಕಳುಹಿಸಿದರು.



ರಾಜಕುಮಾರಿ ಕುಚುಮಾರನಿಗೆ ಹೀಗೆ ಉತ್ತರ ಕಳುಹಿಸಿದಳು: "ಅಯ್ಯಾ, ನೀವು ಬ್ರಾಹ್ಮಣರು. ನಿಮ್ಮನ್ನು ಸೋಲಿಸುವುದು ನನಗಿಷ್ಟವಿಲ್ಲ. ಆದುದರಿಂದ ನಿಮಗೆ ಕೆಲವು ಬಹುಮಾನಗಳನ್ನು ಕಳುಹಿಸುತ್ತೇನೆ. ದಯ ಮಾಡಿ ಅವುಗಳನ್ನು ತೆಗೆದುಕೊಂಡು ನನ್ನನ್ನು ಆಶೀರ್ವದಿಸಿ ಹೋಗಿ."

ಈ ಕಾಗದ ತೆಗೆದುಕೊಂಡು ಬಂದ ಸೇವ ಕರೇ ಬಹುಮಾನಗಳನ್ನೂ ತಂದರು. ಕುಚು ಮಾರನು ಅವುಗಳನ್ನು ತೆಗೆದುಕೊಳ್ಳದೆ ಶಂಬ ರನ ಕೈಯಲ್ಲಿ ಹೀಗೆಂದು ಪ್ರತ್ಯುತ್ತರ ಬರೆಸಿದ: "ನನ್ನನ್ನು ಮದುವೆಯಾಗಲು ಇಷ್ಟವಿಲ್ಲದಿದ್ದರೆ ಆ ಮಾತುಮಾತ್ರ ಹೇಳಬಹುದು. ಈ ವಿಧ ವಾಗಿ ನನ್ನನ್ನು ವಾಪಾಸು ಕಳುಹಿಸಬೇಕಾ ಗಿಲ್ಲ. ನನ್ನನ್ನು ನೀನು ಸೋಲಿಸಿದರೆ ಯಾವ ಕಾಣಿಕೆಯೂ ಇಲ್ಲದೆ ನನ್ನ ದಾರಿ ಹಿಡಿದು ನಾನು ಹೋಗುತ್ತೇನೆ."

ಈ ಪ್ರತ್ಯುತ್ತರ ನೋಡಿ ಸರಸ್ವತಿಗೆ ಕೋಪ ಬಂತು. ಅವಳು ತನ್ನ ಸೇವಕರ ಮೂಲಕ ಒಂದು ತಾಂಬಾಣದಲ್ಲಿ ತರತರದ ಹೂಗಳನ್ನು ಕೊಟ್ಟು ಕಳುಹಿಸಿದಳು.

ಹೂವಿನಮಾಲೆ ಕಟ್ಟುವ ವಿದ್ಯೆಯಲ್ಲಿ ತನ್ನನ್ನು ಪರೀಕ್ಷಿಸಲು ರಾಜಕುಮಾರಿ ಹೀಗೆ ಕಳುಹಿ ಸಿರುತ್ತಾಳೆಂದು ಗ್ರಹಿಸಿ, ಕುಚುಮಾರನು ಅವು ಗಳಿಂದ ವಿಧವಿಧವಾಗಿ ಮಾಲೆ ಕಟ್ಟಿ, ಅವು ಗಳನ್ನು ತನ್ನ ಹೆಸರು ಬರುವಹಾಗೆ ಸೇರಿಸಿ ತಿರುಗಿ ಅವಳಿಗೆ ಕೊಟ್ಟುಕಳುಹಿಸಿದನು. ಅನಂತರ ರಾಜಕುಮಾರಿ ಅವನಬಳಿಗೆ ಕೆಲವು

ನಿಜವಾದ ರತ್ನಗಳನ್ನೂ, ಕೆಲವು ನಕಲಿ ರತ್ನಗಳನ್ನೂ ಕೂಡಿಸಿ ಅವುಗಳಿಗೆ ಬೆಲೆಕಟ್ಟಬೇಕೆಂದು ಕೊಟ್ಟು ಕಳುಹಿಸಿದಳು.

ಕುಚುಮಾರನು ನಿಜವಾದ ರತ್ನಗಳೆಲ್ಲದಕ್ಕೂ ಬೆಲೆಕಟ್ಟಿ, ನಕಲು ರತ್ನಗಳನ್ನು ಪುಡಿಮಾಡಿ ಆ ಪುಡಿಯೊಂದಿಗೇ ಎಲ್ಲವನ್ನೂ ಅವಳಿಗೆ ಹಿಂದೆ ಕಳುಹಿಸಿಕೊಟ್ಟ.

ಅನಂತರ ರಾಜಕುಮಾರಿಯ ಪರಿಚಾರಿಕೆಯರು ಮಾತು ಬಾರದ ಒಂದು ಗಿಳಿಯನ್ನು ತಂದು "ಇದಕ್ಕೆ ಮಾತು ಕಲಿಸಬೇಕೆಂದು ರಾಜಕುಮಾರಿ ಕಳುಹಿಸಿದ್ದಾಳೆ" ಎಂದರು.

ಗಿಳಿಗೆ ಮಾತು ಕಲಿಸುವುದುಕೂಡಾ ಒಂದು ವಿದ್ಯೆ. ಆ ವಿದ್ಯೆಯನ್ನೂ ಕುಚುಮಾರ ಕಲಿತಿದ್ದ. ಆತ ಮರುದಿನಕ್ಕೆಲ್ಲಾ ಆ ಗಿಳಿಗೆ ಮಾತು ಕಲಿಸಿ ಪರಿಚಾರಿಕೆಯರ ದ್ವಾರಾ ಅದನ್ನು ರಾಜಕುಮಾರಿಯ ಬಳಿಗೆ ಹಿಂದಿರುಗಿಸಿದ.

ಅದುವರೆಗೂ ರಾಜಕುಮಾರಿ ಕುಚುಮಾರನನ್ನು ನೋಡಿರಲಿಲ್ಲ. ಈಗ ಅವಳಿಗೆ ಆವನನ್ನು ಕುರಿತು ತಿಳಿದುಕೊಳ್ಳಬೇಕೆಂದು ತೋರಿತು. ಅವಳು ಗಿಳಿಯನ್ನು ಕೇಳಿ ಅವನು ಬಹಳ ಸುಂದರಾಂಗನೆಂದೂ, ಚಿಕ್ಕಪ್ರಾಯದವನೆಂದೂ ತಿಳಿದುಕೊಂಡಳು. ಮತ್ತೇನೂ ಪರೀಕ್ಷೆಮಾಡದೆ, ಅವನನ್ನು ಮದುವೆಯಾಗಲು ನಿಶ್ಚಯಿಸಿಕೊಂಡಳು ರಾಜಕುಮಾರಿ.

ಸರಸ್ವತಿ ಕುಚುಮಾರನನ್ನು ತನ್ನ ಪತಿಯಾಗಿ ಆರಿಸಿದ್ದಾಳೆಂದು ರಾಜಧಾನಿಯೊಳಗೆಲ್ಲಾ ವಾರ್ತೆ ಹರಡಿತು. ಈ ವಿಷಯ ಶಂಬರನಿಗೂ ತಿಳಿಯಿತು. ಹೇಗೆಂದರೆ ರಾಜಕುಮಾರಿ



ತನ್ನ ಗಿಳಿಯ ಮೂಲಕವಾಗಿ ಕುಚುಮಾರನಿಗೊಂದು ಬೆಲೆಬಾಳುವ ಮಣಿಹಾರವನ್ನು ಬಹುಮಾನವಾಗಿ ಕಳಿಸಿದ್ದಳು.

ಶಂಬರನಿಗೆ ದುರ್ಬುದ್ಧಿಯುಂಟಾಯಿತು. ಈಗ ತಮ್ಮಿಬ್ಬರಲ್ಲಿ ಕುಚುಮಾರನಾರೆಂದು ಯಾರಿಗೆ ಗೊತ್ತಿದೆ? ರಾಜಕುಮಾರಿ ಕುಚುಮಾರನನ್ನು ಈವರೆಗೂ ನೋಡಲಿಲ್ಲ. ಇನ್ನು ಅವಳು ಇವನನ್ನು ಪರೀಕ್ಷಿಸಲಾರಳು. ಎಲ್ಲಾ ತನ್ನ ಮತ್ತು ಸೇವಕ ಸೇವಕಿಯರ ಮುಖಾಂತರವಾಗಿ ನಡೆದ ಪರೀಕ್ಷೆ. ದಾದಿಯರೂ ಕುಚುಮಾರನನ್ನು ಕಂಡಿಲ್ಲ. ಆದ್ದರಿಂದ ಕುಚುಮಾರನನ್ನು ತಾನೀಗ ಕೊಂದರೆ ರಾಜಕುಮಾರಿ ತನಗೇ ದಕ್ಕುವಳು. ತಾನೇಕೆ ಬಿಟ್ಟುಬಿಡಬೇಕು? ಈ ದುರಾಶೆಯಿಂದ ಶಂಬರನು, ಆ ರಾತ್ರಿ ಕುಚುಮಾರನು ನಿದ್ರೆಯಲ್ಲಿದ್ದಾಗ, ಒಂದು ದೊಡ್ಡ ಕಲ್ಲಿನಿಂದ ಅವನ ತಲೆಗೆ ಹೊಡೆದು ಕುತ್ತಿಗೆಗೆ ಅದೇ ಕಲ್ಲನ್ನು ಕಟ್ಟಿ ಎತ್ತಿಕೊಂಡು ಹೋಗಿ ಕೋಟೆಯ ಹೊರಗಿರುವ ಅಗಳತದೊಳಗೆ ಹಾಕಿಬಿಟ್ಟ. ಕುಚುಮಾರನ ಕೊರಳಲ್ಲಿದ್ದ ಮಣಿಹಾರವನ್ನು ತಾನು ಧರಿಸಿಕೊಂಡ.

ಆದರೆ ಶಂಬರನಿಗೆ ಹೊಸ ತೊಂದರೆಯೊಂದು ಬಂತು. ಬೆಳಗಾಗುವಾಗ ಸರಸ್ವತಿ ತನ್ನ ಪ್ರಿಯನಿಗೆ ಗಿಳಿಯಮೂಲಕ ಒಂದು ಸಂದೇಶವನ್ನು ಕಳುಹಿಸಿದಳು.

ಅದು ಕುಚುಮಾರನನ್ನು ಬಿಡದಿಯಲ್ಲೆಲ್ಲಾ ಹುಡುಕಿ, ಶಂಬರನನ್ನು ಕುರಿತು "ಕುಚುಮಾರನೆಲ್ಲಿ?" ಎಂದು ಕೇಳಿತು. ಕೂಡಲೇ ಶಂಬರ, "ನಾನೇ ಕುಚುಮಾರ. ಏನಾಗಬೇಕು?





ಏನು ಸಮಾಚಾರ?" ಎಂದು ಕೇಳಿದ.

"ನೀನೇಕೆ ಕುಚುಮಾರನಾಗುವೆ? ಅವನೆಲ್ಲಿ ಹೇಳು. ರಾಜಕುಮಾರಿ ಸಮಾಚಾರ ಕಳಿಸಿದ್ದಾಳೆ" ಎಂದಿತು ಗಿಳಿ.

"ಇಲ್ಲಿಗೆ ಬಾ, ಹೇಳುತ್ತೇನೆ" ಎಂದ ಶಂಬರ. ಗಿಳಿ ಸಮೀಪ ಬರುತ್ತಲೇ ಅವನು ಅದರ ಕುತ್ತಿಗೆ ಹಿಡಿದು, "ನನಗೆ ಆ ಸಮಾಚಾರ ಹೇಳುತ್ತಿಯಾ ಅಲ್ಲ ಕೊಂದು ಹಾಕಲೆ?" ಎಂದ. ಎಷ್ಟು ಹೆದರಿಸಿದರೂ ಗಿಳಿ ಮಾತಾಡಲಿಲ್ಲ. ಕೋಪದಿಂದ ಶಂಬರನು ಗಿಳಿಯನ್ನು ಕರಕ್ಕನೆ ಕೊಂದುಹಾಕಿದ.

ತಾನು ಕಳುಹಿಸಿದ ಗಿಳಿ ಹಿಂದಿರುಗಿ ಬಾರದ್ದರಿಂದ ರಾಜಕುಮಾರಿಗೆ ತಳಮಳವಾಯಿತು. ಕುಚುಮಾರನ ಪ್ರತ್ಯುತ್ತರಕ್ಕಾಗಿಯೇ ಅವಳು ಅಷ್ಟು ಆತುರವಾಗಿದ್ದಳು. ನೋಡಿ ನೋಡಿ ತಾಳಲಾರದೆ ಕಡೆಗೆ ಅವಳು ತನ್ನ ದಾಸಿಯರನ್ನು ಕುಚುಮಾರನ ಬಿಡದಿಗೆ ಕಳುಹಿಸಿದಳು. ಅವರು ಬಂದು ಶಂಬರನನ್ನು ಕುರಿತು "ಕುಚುಮಾರನೆಂದರೆ ಯಾರು?" ಎಂದು ಕೇಳಿದರು.

"ನಾನೇ ಕುಚುಮಾರ" ಎಂದ ಶಂಬರ ಹೆಮ್ಮೆಯಿಂದ.

"ನಮ್ಮ ರಾಜಕುಮಾರಿ ನಿಮ್ಮ ಬಳಿಗೆ ಗಿಳಿಯನ್ನು ಕಳುಹಿಸಿದಳು. ಅದೇನಾಯಿತು?" ಎಂದು ಆತುರದಿಂದ ಕೇಳಿದರು ದಾಸಿಯರು.

"ಅದರ ಕರ್ಮಕ್ಕೆ ಒಂದು ಗಂಡು ಬೆಕ್ಕು ಅದನ್ನು ಹಿಡಿದುಬಿಟ್ಟಿತು" ಎಂದ ಶಂಬರ ಬಹಳ ವ್ಯಸನ ತೋರಿಸುತ್ತಾ.

ದಾಸಿಯರು ಸರಸ್ವತಿಯ ಬಳಿಗೆ ಹಿಂದಿರುಗಿ, "ಅಮ್ಮಾ, ಆ ಬಿಡದಿಯಲ್ಲಿ ಇದುವರೆಗೆ ಇದ್ದಾತ ತಾನೇ ಕುಚುಮಾರನೆಂದು ಹೇಳಿದ. ನಮ್ಮ ಗಿಳಿಯನ್ನು ಬೆಕ್ಕು ಹಿಡಿಯಿತಂತೆ. ಆತ ಬಹಳ ವಿಕಾರವಾಗಿದ್ದಾನೆ. ಪಂಡಿತನ ಲಕ್ಷಣವೇ ಅವನಿಗಿಲ್ಲ. ನಮಗೇನೋ ಅನುಮಾನವಾಗಿದೆ!" ಎಂದರು ದುಗುಡದಿಂದ.

ಕುಚುಮಾರನು ಬಹಳ ಸುಂದರನೆಂದು ಗಿಳಿ ಈ ಮೊದಲೇ ಹೇಳಿತ್ತು. ರಾಜಕುಮಾರಿಗೂ ಅನುಮಾನವಾಯಿತು. ನಿಜವನ್ನು ತಿಳಿಯಲಿಕ್ಕಾಗಿ ಅವಳು ಎಲ್ಲರಿಗೂ ತಿಳಿಯಲಾರದ ಲಿಪಿಯಲ್ಲಿ ಒಂದು ಶ್ಲೋಕವನ್ನು ಬರೆದು ದಾಸಿಯರ ಕೈಗೆ ಕೊಟ್ಟು "ಇದಕ್ಕೆ ಪ್ರತ್ಯುತ್ತರ ಪಡೆದುಕೊಂಡು ಬನ್ನಿ" ಎಂದಳು.

ಆ ಶ್ಲೋಕವನ್ನು ಓದಲು ಎಷ್ಟು ಪ್ರಯತ್ನ ಮಾಡಿದರೂ ಶಂಬರನಿಗಾಗಲಿಲ್ಲ. ಉರಿದುಬಿದ್ದ.

"ಹೀಗೆ ನಿಮಿಷ ನಿಮಿಷಕ್ಕೆ ನಿಮ್ಮ ರಾಜ ಕುಮಾರಿ ನನ್ನನ್ನು ಪರೀಕ್ಷಿಸುವುದೇನೂ ಚೆನ್ನಾಗಿಲ್ಲ. ನಾನು ಪ್ರತ್ಯುತ್ತರ ಕೊಡುವುದಿಲ್ಲ ಹೋಗಿ" ಎಂದನವ.

"ನಿಮಗೆ ಹೊರತು ಮತ್ತಾರಿಗೂ ತಿಳಿಯದಿರಲಿಕ್ಕೆ ನಮ್ಮ ರಾಜಕುಮಾರಿ ರಹಸ್ಯ ಲಿಪಿ ಬರೆದು ಕಳಿಸಿದ್ದಾರೆ. ಅಷ್ಟೇ ಹೊರತು ಇದು ಪರೀಕ್ಷೆಯೇ ಅಲ್ಲ. ಉತ್ತರ ರಹಸ್ಯ ಲಿಪಿಯಲ್ಲೇ ಬರೆಯಿರಿ" ಎಂದರು ದಾಸಿಯರು.

"ನಾನು ಬರೆಯಲಾರೆ. ಇದು ಪರೀಕ್ಷೆಯೇ ನಿಜ. ನಾನು ಕುಚುಮಾರನಲ್ಲವೆಂದು ನಿಮ್ಮ ರಾಜಕುಮಾರಿಗೆ ಸಂದೇಹವಿದ್ದರೆ ಇದೋ ಅವಳು ಈ ಮೊದಲು ಕಳುಹಿಸಿದ ಮಣಿಹಾರ!" ಎಂದ ಶಂಬರ ಬಹಳ ಕೋಪದಿಂದ.

ಇದನ್ನು ಕೇಳಿ ದಾಸಿಯರ ಅನುಮಾನ ಬಲವಾಯಿತು. ನೀನು ಕುಚುಮಾರನಲ್ಲವೆಂದು ಯಾರೂ ಹೇಳದಿದ್ದರೂ ಅವನೇ, ಕುಂಬಳಕಾಯಿ ಕಳ್ಳ ಹೆಗಲು ತಡವಿಕೊಂಡ ಹಾಗೆ ವರ್ತಿಸಿದ. ದಾಸಿಯರು ಹೊರಟು ಹೋದರು.

ದಾಸಿಯರಿಗೆ ಕಂಡ ಹಾಗೆಯೇ ರಾಜಕುಮಾರಿಗೂ ತೋರಿತು. ಅವಳು ಅವನಿಗೆ ಇನ್ನೊಂದು ಪರೀಕ್ಷೆ ಇಟ್ಟಳು. ಮಾತು ಬಾರದ ಇನ್ನೊಂದು ಗಿಳಿಯನ್ನು ಅವನಬಳಿಗೆ ಕಳಿಸಿದಳು. ದಾಸಿಯರು ಶಂಬರನ ಬಳಿಗೆ ಬಂದು, "ಅಯ್ಯಾ, ನೀವು ಮಾತು ಕಲಿಸಿದ ಗಿಳಿ ಸತ್ತುಹೋದ ಮೇಲೆ



ನಿಮ್ಮೊಡನೆ ಉತ್ತರ ಪ್ರತ್ಯುತ್ತರ ನಡೆಸಲು ಸಾಧ್ಯವಿಲ್ಲದೆ ಹೋಯಿತು. ಹೊಸ ಲಿಪಿಯಲ್ಲಿ ಬರೆದರೆ ನೀವು ಉತ್ತರ ಕೊಡದೇ ಹೋದಿರಿ. ಈ ಗಿಳಿಗೆ ಮಾತು ಕಲಿಸಿಬಿಡಿ. ಇದು ನಿಮ್ಮ ನಡುವೆ ರಾಯಬಾರಿಯಾಗಿರುತ್ತದೆ" ಅಂದರು.

"ನನಗಿದೇ ಕೆಲಸವೇ? ನಾನು ಈ ಗಿಳಿಗೆ ಮಾತು ಕಲಿಸಲಾರೆ. ನನ್ನನ್ನು ಮದುವೆಯಾಗಲು ಇಷ್ಟವಿಲ್ಲದೆ ನಿಮ್ಮ ಒಡತಿ ಹೀಗೆಲ್ಲಾ ಕಲ್ಪಿಸುತ್ತಾಳೆಂದು ಕಾಣುತ್ತೆ" ಎಂದ ಶಂಬರ. ಈ ಮಾತನ್ನು ಕೇಳಿದಮೇಲೆ ಸರಸ್ವತಿಗೆಕೂಡಾ ಶಂಬರನ ಮೋಸದ ಸಂಗತಿ ಪೂರಾ ತಿಳಿದು ಹೋಯಿತು. ಬಹಳ ಚಡಪಡಿಸಿದಳು. ಇಷ್ಟರಲ್ಲೊಂದು ವಿಚಿತ್ರವಾಯಿತು.

ರಾಜಧಾನಿಗೆ ಸಮೀಪದಲ್ಲಿ ಒಂದು ಬೆಸ್ತರ ಗ್ರಾಮವಿದೆ. ಅಲ್ಲಿಯ ಬೆಸ್ತರು ಒಂದು ಹೊಸ ಬಲೆಯನ್ನು ತಯಾರುಮಾಡಿ ಅದನ್ನು ಉಪಯೋಗಿಸಲಿಕ್ಕೆ ಪುರೋಹಿತನೊಡನೆ ಮುಹೂರ್ತ ಕೇಳಿದರು. ಆತ ಮೀನಮೇಷ ಲೆಕ್ಕಮಾಡಿ, "ಈ ದಿನ ಅರ್ಧರಾತ್ರಿಗೆ ದಿವ್ಯವಾಗಿದೆ" ಎಂದ.

ಅರ್ಧರಾತ್ರಿಯಲ್ಲಿ ಬಲೆ ಬೀಸಲು ನದಿಗೆ ಹೋಗುವುದು ಸಾಧ್ಯವಿಲ್ಲ. ಕೋಟೆಯ ಹೊರಗಿನ ಅಗಳತದೊಳಗೆ ಹೊಸ ನೀರು ಬಂದ ಸಂಗತಿ ಅವರಿಗೆ ತಿಳಿದಿತ್ತು. ಆದ್ದರಿಂದ ಮುಹೂರ್ತ ವೇಳೆಗೆ ಅವರು ಅಗಳತದ ಬಳಿಗೆ ಹೋಗಿ ಅಲ್ಲಿ ಬಲೆ ಹಾಕಿದರು. ಬಲೆಯನ್ನು ಎಳೆದುಕೊಳ್ಳುವಾಗ ಬೆಸ್ತರಿಗೆ ಬಹಳ ಭಾರ ತೋರಿತು. ಬಹಳ ಮೀನು ಬಿದ್ದಿರಬೇಕೆಂದು ಆಶೆಪಟ್ಟರು. ಆದರೆ ಬಲೆಯನ್ನು ತೀರಾ ಹೊರಗೆಳೆದು ನೋಡಿದಾಗ ಅದರಲ್ಲೊಂದು ಮಾನವ ಶರೀರ ವಿರುವುದು ಕಾಣಿಸಿತು. ಮೊದಲು ಅದು ಶವವೆಂದೇ ಬೆಸ್ತರು ಭಾವಿಸಿದರು. ಪರೀಕ್ಷೆ ಮಾಡಿದಾಗ ಆ ಶರೀರದಲ್ಲಿ ಬಿಸಿಯಿತ್ತು. ಗುಂಡಿಗೆ ನಿಧಾನವಾಗಿ ಆಡುತಿತ್ತು.

ಅದು ಕುಚಃಮಾರನೇ. ಶಂಬರನು ಕಲ್ಲು ಕಟ್ಟಿ ಆತನನ್ನು ಅಗಳತದೊಳಗೆ ಬಿಸುಟ ಸ್ವಲ್ಪ ಹೊತ್ತಿನೊಳಗೇ ಬೆಸ್ತರು ಅಲ್ಲಿಗೆ ಬಂದು ಅವನನ್ನು ತಮ್ಮ ಬಲೆಯಲ್ಲಿ ಮೇಲೆಳೆದರು.

ಶರೀರದಲ್ಲಿ ಇನ್ನೂ ಪ್ರಾಣ ವಿರುವುದೆಂದು ತಿಳಿಯುತ್ತಲೇ ಬೆಸ್ತರು ಅವನನ್ನು ಹೊತ್ತುಕೊಂಡು ತಮ್ಮ ಹಳ್ಳಿಗೆ ತೆಗೆದುಕೊಂಡು ಹೋಗಿ ತಲೆಗೆ ಕಟ್ಟು ಕಟ್ಟಿ, ಶರೀರವನ್ನು



ಮರ್ದಿಸಿ ಆತ ಪೂರ್ಣ ಬದುಕುವ ಹಾಗೆ ಮಾಡಿದರು. ಒಂದೆರಡು ದಿನ ಅವನಿಗೆ ಆಹಾರ ವಿತ್ತು ಉಪಚರಿಸಿದರು. ಕುಚುಮಾರ ಪೂರ್ಣ ಆರೋಗ್ಯ ತಾಳಿದ. ಆದರೆ ತಾನು ಯಾರೆಂದು ಅವರಿಗೆ ಹೇಳಲು ನಾಚಿಕೊಂಡ. ಆದ್ದರಿಂದ ಆತ ಅವರೊಂದಿಗೆ ಇರುತ್ತಾ ದಿನಾ ಅವ ರೊಂದಿಗೆ ನದಿಗೆ ಹೋಗಿ ತೆಪ್ಪ ತರಿಗಳನ್ನು ನಡೆಸುವುದರಲ್ಲಿ ಅವರಿಗೆ ಸಹಾಯಮಾಡುತಿದ್ದ.

ಇತ್ತ ಶಂಬರನು ತಾನೇ ಕುಚುಮಾರನೆಂದು ಹೇಳಿಕೊಳ್ಳುತ್ತಾ, ಸರಸ್ವತಿಯನ್ನು ತನಗೆ ವಿವಾಹ ಮಾಡಿಸಬೇಕೆಂದು ರಾಜನನ್ನು ತೊಂದರೆಪಡಿಸುತ್ತಿದ್ದನು. ಸರಸ್ವತಿ ಇದಕ್ಕೆ ಸಮ್ಮತಿಸಿ, ಮುಹೂರ್ತವಿಟ್ಟು ಮದುವೆಯನ್ನು ಪ್ರಕಟಿಸಬೇಕೆಂದೂ, ದೇಶದೇಶಗಳ ಪಂಡಿತರೆಲ್ಲ ರನ್ನೂ ಮದುವೆಗೆ ಆಹ್ವಾನಿಸಬೇಕೆಂದೂ ತಂದೆ ಯೊಡನೆ ಹೇಳಿದಳು. ಈ ಪ್ರಕಟನೆ ಕೇಳಿ ಕುಚು ಮಾರನು ಬರುವನೆಂದೂ, ಒಂದುವೇಳೆ ಬಾರ ದಿದ್ದರೆ ದೊಡ್ಡ ದೊಡ್ಡ ಪಂಡಿತರು ಈ ಮೋಸ ಗಾರನ ಮೋಸವನ್ನು ಬಯಲು ಮಾಡುವ ರೆಂದೂ ನಂಬಿದ್ದಳು.

ಈ ಸಂಗತಿಯಾವುದೂ ಕುಚುಮಾರನಿಗೆ ತಿಳಿಯದು. ಒಂದು ದಿನ ಬೆಳಗ್ಗೆ ಅವನು ನದಿ ಯಲ್ಲಿ ತರಿಯನ್ನು ಇಟ್ಟುಕೊಂಡಿರುವಾಗ ಕೆಲವು ಪಂಡಿತರು ಅದರಲ್ಲಿ ಕುಳಿತು ನದಿಯನ್ನು ದಾಟಿ ದರು. ಅವರು ಮಾತಾಡುತ್ತಿರುವ ಮಾತುಗ ಳಿಂದ ಆ ದಿನವೇ ತನಗೆ ರಾಜಕುಮಾರಿಯೊಡನೆ ವಿವಾಹವಾಗಲಿರುವುದೆಂದು ತಿಳಿದುಕೊಂಡು ಆಶ್ಚರ್ಯಪಟ್ಟ. ತಾನು ಇಲ್ಲದೆ ರಾಜಕುಮಾರಿ



ಹೇಗೆ ತನ್ನನ್ನು ಮದುವೆಯಾಗುವಳೋ! ಈ ಆಶ್ಚರ್ಯವನ್ನು ನೋಡಬೇಕು ಎಂದುಕೊಂಡು ಆತ ತರಿಯನ್ನು ನದಿಯ ಬದಿಯಲ್ಲಿ ಕಟ್ಟಿ, ಪಂಡಿತರ ಹಿಂದೆಯೇ ಅರಮನೆಗೆ ಹೋದ.

ಮದುವೆಗೆ ಭೋಜರಾಜ ಮೊದಲಾದ ಮಹಾ ರಾಜರು, ಮಹಾಕವಿಗಳು, ವಿದ್ವಾಂಸರು ಅನೇಕರು ಬಂದರು. ಶಂಬರನನ್ನು ಮದುಮಗ ಮಾಡಿ ಕರೆದು ತಂದರು. ಆವನನ್ನು ನೋಡಿದ ಕೂಡಲೇ ಮದುವೆಗೆ ಬಂದವರಲ್ಲಿ ಕೆಲವರು ಅವನು ಕುಚುಮಾರನಲ್ಲವೆಂದು ಹೋಲಿಸಿಕೊಂಡರು. ಅಂಥವರು ಕಾಶೀವಾಸಿಗಳಾದ ಕುಚುಮಾರನ ಮಿತ್ರರಾಗಿದ್ದರು. ಕೂಡಲೇ ಅವರು ಶಂಬರನ ಬಳಿಗೆ ಹೋಗಿ ಅವನಿಗೇನೂ ಪಾಂಡಿತ್ಯ ವಿಲ್ಲವೆಂಬುದನ್ನು ರುಜುಮಾಡಿಸಿದರು. ಅವರ ಪ್ರಶ್ನೆಗಳಿಗೆ ತಕ್ಕ ಸಮಾಧಾನ ಹೇಳಲಾರದೆ ಶಂಬರನ ಮುಖ ಬಿಳಿಚಿತು. ಸಭೆಯಲ್ಲಿ ಅಲ್ಲಕಲ್ಲೋಲವಾಯಿತು. ಅರಸನು ಶಂಬರನಬಳಿಗೆ ಬಂದು "ನೀನು ಯಾರು? ಅಸಲು ನಿನ್ನ ಹೆಸರೇನು?" ಎಂದು ಕೇಳಿದ. ಶಂಬರನು ನಡುಗುತ್ತಾ ನಡೆದುದೆಲ್ಲಾ ಸರಿಯಾಗಿ ಹೇಳಿಬಿಟ್ಟ. ಅವನ ಭಯಂಕರ ಮೋಸವನ್ನೆಲ್ಲಾ ಕೇಳಿ ಅರಸ ಸಿಟ್ಟುಗೊಂಡು, "ಇವನನ್ನು ಈಗಲೇ ಇಲ್ಲಿಂದ ಅತ್ತ ಒಯ್ದು ತಲೆ ತೆಗೆಯಿರಿ!" ಎಂದು ಅಜ್ಞಾಪಿಸಿದ.

ಈ ವಿನೋದವನ್ನೆಲ್ಲಾ ಒಂದು ಮೂಲೆಯಲ್ಲಿ ನಿಂತು ನೋಡುತಿದ್ದ ಕುಚುಮಾರನು ಮುಂದೆ ಬಂದು, "ಮಹಾರಾಜ! ಇವನನ್ನು ಕ್ಷಮಿಸಿಬಿಡಿ. ಅಜ್ಞಾನದಿಂದ ಇಂತಹ ಕೆಲಸ ಮಾಡಿದ. ಇವನ ತಂದೆ ತಾಯಿಗಳು ಬಹಳ ಗೌರವಸ್ಥರು. ನಾನೇ ಕುಚುಮಾರ. ನಾನೇ ಇವನನ್ನು ಕ್ಷಮಿಸುವಾಗ, ಮತ್ತಾರೂ ಇವನನ್ನು ಶಿಕ್ಷಿಸುವ ಅಗತ್ಯವೂ ಇಲ್ಲ!" ಎಂದ ವಿನಯದಿಂದ.

ಸರಸ್ವತಿಯ ದಾಸಿಯೊಬ್ಬಳು ಕುಚುಮಾರನ ಗುರುತು ಹಿಡಿದಳು. ವಿವಾಹಕ್ಕೆ ಬಂದ ಕವಿಗಳೂ ಪಂಡಿತರೂ ಬಹಳ ಸಂತೋಷಪಟ್ಟರು. ರಾಜ ಶಂಬರನನ್ನು ಬಿಟ್ಟುಬಿಟ್ಟ. ಆ ದಿನವೇ ಕುಚುಮಾರನಿಗೆ ರಾಜಕುಮಾರಿ ಸರಸ್ವತಿಯೊಂದಿಗೆ ಮಹಾ ವೈಭವದಿಂದ ವಿವಾಹವು ಸಾಂಗವಾಗಿ ನೆರವೇರಿತು.





# ಜಮೀನುದಾರರ ಪರೀಕ್ಷೆ

ಹಿಂದೆ ತುಂಗಭದ್ರಾತೀರದಲ್ಲಿ ಬಿಳೀಪಾಳ್ಯ ಕರೇಪಾಳ್ಯ ಎಂಬೆರಡು ಜಮೀನುದಾರೀ ಗ್ರಾಮಗಳಿದ್ದುವು. ಎರಡು ಗ್ರಾಮಗಳ ಜಮೀನುದಾರರೂ ದೂರದಬಂಧುಗಳಾಗಿದ್ದರು. ಇಬ್ಬರೂ ಸ್ನೇಹಿತರೇ ಆದ್ದರಿಂದ ಆಗಾಗ ಒಬ್ಬರನ್ನೊಬ್ಬರು ನೋಡಲಿಕ್ಕೆ ಬಂದು ಕೆಲವುದಿನ ಇದ್ದು ಹೋಗುತ್ತಾ ಇದ್ದರು.

ಒಂದುಸಾರಿ ಹೀಗೆ ಕರೇಪಾಳ್ಯದ ಜಮೀನುದಾರ ಬಿಳೀಪಾಳ್ಯದ ಜಮೀನುದಾರನಲ್ಲಿಗೆ ಬಂದ. ಸಂಜೆಹೊತ್ತಿನಲ್ಲಿ ಸ್ನೇಹಿತರಿಬ್ಬರೂ ಅಂಗಳದಲ್ಲಿ ಕುರ್ಚಿಹಾಕಿ ಕುಳಿತುಕೊಂಡು ಮಾತಾಡುತ್ತಿರುವಾಗ, ಬಿಳೀಪಾಳ್ಯದವರ ಹಸುಮಂದೆಯನ್ನು ಹೊಡೆದುಕೊಂಡು ಒಕ್ಕಲಿಗ ರಂಗಣ್ಣ ಬಂದ.

ರಂಗಣ್ಣನನ್ನು ಕಂಡಕೂಡಲೇ ಯಜಮಾನ "ಏ, ನಮ್ಮ ಟಗರೆಲ್ಲೋ?" ಎಂದು ಕೇಳಿದನು.

"ಬರುತ್ತಿದೆ ದ್ಯಾವ್ರೂ" ಎಂದು ರಂಗಣ್ಣ ಗಟ್ಟಿಯಾಗಿ ವಿಸಿಲುಹಾಕಿದ. ಕೂಡಲೇ ಒಂದು ಬಿಳಿಯಟಗರು ಗೊರಸುಗಳ ಟಕಟಕ ಶಬ್ದ ಮಾಡುತ್ತಾ ಚೆಂಗಚೆಂಗನೆ ಎಗರಿಕೊಂಡು ಬಂತು. ಅದು ಮೊದಲು ರಂಗಣ್ಣನ ಬಳಿಗೆ ಬಂದು ನಿಂತಿತು. ಅನಂತರ ಅವನ ಸನ್ನೆಯ ಪ್ರಕಾರ ತನ್ನ ಯಜಮಾನನ ಬಳಿಗೆ ಸಾಗಿನಿಂತಿತು.

ಬಿಳೀಪಾಳ್ಯದ ಜಮೀನುದಾರ ತನ್ನ ಅತಿಥಿಯಕಡೆ ನೋಡಿ, "ನನ್ನ ಉಳಿದ ಎಲ್ಲಾ ಹಸುಗಳೂ ಒಂದು ತೂಕವಾದರೆ ಈ ಟಗರೊಂದೇ ಅವುಗಳ ಸರಿತೂಕ! ಈಗಲೇ ಸಾವಿರ ರೂಪಾಯಿಗೆ ಯಾರಾದರೂ ಕೇಳಿದರೂ ನಾನು ಇದನ್ನು ಕೊಡಲಾರೆ. ಏಕೆಂದರೆ ಇಂತಹ ಟಗರು ಈ ಪ್ರಾಂತದಲ್ಲೇ ಬೇರಿಲ್ಲ. ಇದನ್ನು ಇಷ್ಟು ಚೆನ್ನಾಗಿ ಬೆಳೆಸಿದ ಕೀರ್ತಿ ನಮ್ಮ ರಂಗಣ್ಣನಿಗೇ ದಕ್ಕಬೇಕು! ಇವನಿಂದಲೇ ಈ ಟಗರು ಇಷ್ಟೊಂದು ಚೆನ್ನಾಗಿದೆ. ಇವನಷ್ಟು ವಿಶ್ವಾಸದ ಆಳು ಬೇರೆ ಎಲ್ಲಿಯೂ ಇಲ್ಲ" ಎಂದ.

ಇದನ್ನು ಕೇಳಿ ಕರೇಪಾಳ್ಯ ಜಮೀನುದಾರ ಗಹಗಹಿಸಿ ನಕ್ಕು, "ನಿಮಗೇನಾದರೂ ಹುಚ್ಚೇ? ಸೇವಕರಿಗೆ ವಿಶ್ವಾಸವೆಂದರೇನು? ಎಲ್ಲರೂ ಕಳ್ಳ

ಡಿ. ಸುಬ್ರಹ್ಮಣ್ಯ





ಭಂಡರೇ! ಅವಕಾಶ ಸಿಕ್ಕಿದರೆ ಸಾಕು, ಎಲ್ಲಾ ಸೇವಕರೂ ಮೋಸ ಮಾಡಿಬಿಡುತ್ತಾರೆ. ನಿಮಗೆ ಗೊತ್ತಿಲ್ಲ" ಎಂದು ಹೇಳಿದ.

ಬಿಳೀಪಾಳ್ಯದ ಒಡೆಯ ಆಶ್ಚರ್ಯಪಡುತ್ತ, "ನಮ್ಮ ರಂಗ ಅಂಥವನಲ್ಲ. ಪ್ರಾಣಹೋದರೂ ಸುಳ್ಳಾಡಲಾರ" ಎಂದ.

"ಏನನ್ನುವಿರಿ ನೀವು? ಅವನು ನಿಮ್ಮೊಡನೆ ಎಂದೂ ಸುಳ್ಳುಹೇಳಲೇ ಇಲ್ಲ ಎನ್ನುವಿರಾ?" ಕೇಳಿದ ಅತಿಥಿ.

"ನನ್ನೊಡನಾಗಲೀ ಮತ್ತಾರೊಡನೇ ಆಗಲಿ ಆತ ಸುಳ್ಳಾಡಿದ್ದೇ ಇಲ್ಲ" ಎಂದ ಬಿಳೀಪಾಳ್ಯದ ಜಮಿನುದಾರ.

"ನೀವು ತುಂಬಾ ಅಮಾಯಕರು. ನನಗೆ ನಗುಬರುತ್ತೆ. ಬೇಕಾದರೆ ನನಗೆ ಮೂರು ದಿವಸ ಗಡುವುಕೊಡಿ. ಅವನು ನಿಮ್ಮ ಹತ್ತಿರ ಸುಳ್ಳು ಹೇಳಿದಂತೆ ರುಜುಮಾಡಿಸುತ್ತೇನೆ. ಏನನ್ನುವಿರಿ?" ಎಂದ ಅತಿಥಿ.

"ನಿಮ್ಮಿಂದ ಅದು ಸಾಧ್ಯವಿಲ್ಲ" ಎಂದ ಬಿಳೀಪಾಳ್ಯದ ಜಮಿನುದಾರ. ಇಬ್ಬರೂ ಆಚೀಚೆ ವಾದಾಡಿ ಪಂಥ ಹಾಕಿಕೊಂಡರು. ರಂಗನು ಸುಳ್ಳಾಡಿದಂತೆ ರುಜುವಾದರೆ ಕರೀಪಾಳ್ಯದ ಜಮಿನುದಾರನಿಗೆ ಸಾವಿರ ರೂಪಾಯಿ ಕೊಡಬೇಕು; ರುಜುಮಾಡದೇ ಹೋದರೆ ಕರೀಪಾಳ್ಯದ ಜಮಿನುದಾರನೇ ಸಾವಿರ ರೂಪಾಯಿ ಕೊಡುತ್ತಾನೆ.

"ಈ ಪಂಥದಲ್ಲಿ ನಾನೇ ಗೆಲ್ಲುತ್ತೇನೆ ನೋಡಿ. ಆದರೆ ನಮ್ಮ ಪಂಥದ ಗಡುವುದಾಟುವವರೆಗೂ ಈ ಪಂದ್ಯದ ವಿಷಯ ನಮ್ಮಿಬ್ಬರ ಹೊರತು ಮತ್ತಾರಿಗೂ ತಿಳಿಯದಂತೆ ನೋಡಿಕೊಳ್ಳಿ" ಎಂದ ಅತಿಥಿ. "ಸರಿ" ಎಂದ ಬಿಳೀಪಾಳ್ಯದ ಜಮಿನುದಾರ.

ಕರೀಪಾಳ್ಯದ ಒಡೆಯ ಆ ರಾತ್ರಿ ತನ್ನ ನೌಕರನಾದ ಸೋಮಣ್ಣನೊಡನೆ ಆ ಸಂಗತಿಯನ್ನೆಲ್ಲಾ ಹೇಳಿ, "ಏನೋ ಸೋಮಾ, ನಾವು ಪಂದ್ಯ ಗೆಲ್ಲಲಿಕ್ಕೆ ಏನಾದರೂ ಉಪಾಯ ಹೇಳುತ್ತಿಯಾ?" ಎಂದು ಕೇಳಿದ.

ಸೋಮಣ್ಣನಿಗೆ ಬಹಳ ಪೇಚಿಗಿಟ್ಟಿತು. ಸಹಾಯ ಮಾಡುತ್ತೇನೆಂದರೆ ತಾನು ಮೋಸಗಾರನೆಂದು ಯಜಮಾನನ ಹತ್ತಿರ ಒಪ್ಪಿಕೊಂಡ ಹಾಗೇ ಆಗುತ್ತೆ. ಆದ್ದರಿಂದ ಆತ, "ಅಯ್ಯೋ! ನಾನೆಲ್ಲಿ ದ್ಯಾವ್ರೂ. ನಾನು ನಿಮಗೆ ಸಲಹೆ ಹೇಳ





ತಕ್ಕವನೇ" ಎಂದು ಉಪಾಯವಾಗಿ ಜಾರಿಸಿದ. ಸೋಮಣ್ಣ ಏಕೆ ಜಾರಿಕೊಳ್ಳುವುದೆಂದು ಜಮಿಾನುದಾರನಿಗೆ ಅರ್ಥವಾಯಿತು. ಅವನ ಅನುಮಾನವನ್ನು ನಿವಾರಿಸಲಿಕ್ಕಾಗಿ "ಲೋ, ನಾನೀ ಪಂದ್ಯ ಗೆಲ್ಲುವಂತೆ ನೀನೇನಾದರೂ ಉಪಾಯ ಮಾಡಿದರೆ ನಿನಗೆ ನೂರು ರೂಪಾಯಿ ಕೊಡುತ್ತೇನೆ!" ಎಂದ.

"ಹಾಗೇ ಮಾಡಿ ದ್ಯಾವ್ರು. ರಂಗಣ್ಣನೇನು ಆಕಾಶದಿಂದ ಜಾರಿಬಿದ್ದವನೆ? ಹಣದ ಆಶೆ ತೋರಿಸಿದರೆ ಏನುಮಾಡೆಂದರೂ ಮಾಡಿಬಿಡುತ್ತಾನೆ" ಎಂದ ಸೋಮಣ್ಣ ಧೈರ್ಯದಿಂದ.

"ಹಾಗಾದರೆ ನೋಡು, ನಿನ್ನ ಕೈಗೆ ಇನ್ನೂರು ಕೊಡುತ್ತೇನೆ. ಆ ಟಗರನ್ನು ತಕ್ಕೊಂಡುಬಿಡು" ಎಂದು ಹೇಳಿ ಕರೇಪಾಳ್ಯದ ಜಮಿಾನುದಾರ ತನ್ನ ನೌಕರ ಸೋಮಣ್ಣನಿಗೆ ಇನ್ನೂರು ರೂಪಾಯಿಕೊಟ್ಟನು.

ಸೋಮಣ್ಣ ಒಂದೆರಡು ದಿನಗಳಲ್ಲಿ ರಂಗಣ್ಣನ ವಿಷಯವೆಲ್ಲಾ ತಿಳಿದುಕೊಂಡ. ರಂಗಣ್ಣನನ್ನು ಹೇಗೆ ಬುಟ್ಟಿಗೆ ಹಾಕುವುದೆಂದು ಅವನಿಗೆ ತಿಳಿದುಹೋಯಿತು.

ಸ್ವಲ್ಪಕಾಲವಾಗಿ ರಂಗಣ್ಣ ಲಕ್ಷ್ಮಿ ಎಂಬವಳನ್ನು ಮದುವೆಮಾಡಿಕೊಳ್ಳಲು ಮಾತುಕತೆ ನಡೆಯುತಿತ್ತು. ಇಬ್ಬರೂ ಮದುವೆಗೆ ಒಪ್ಪಿದ್ದರು. ಆದರೆ ರಂಗಣ್ಣ ಬಡವ. ಮನೆಬಾಗಿಲೂ ಅವನಿಗಿಲ್ಲ. ಜಮಿಾನುದಾರರ ಕೊಟ್ಟಿಗೆಯಲ್ಲೇ ಆತ ಮಲಗುತಿದ್ದ. ಲಕ್ಷ್ಮಿಯ ತಂದೆಗೆ ಎರಡು ಏಕರೆ ಹೊಲವಿತ್ತು.



"ನೀನು ನನ್ನ ಮಗಳನ್ನು ಮಾಡಿಕೊಳ್ಳಬೇಕಾದರೆ ಮತ್ತೇನೂ ಅಭ್ಯಂತರವಿಲ್ಲ. ನೀನು ಮೊದಲು ಒಂದು ಸಣ್ಣ ಮನೆ ಮತ್ತು ಹಿತ್ತಿಲುಹೊಲ ಏರ್ಪಾಡುಮಾಡಿಕೊಂಡು ಆ ಮೇಲೆ ಮದುವೆಯ ಮಾತಾಡು" ಎನ್ನುತ್ತಾನೆ ಲಕ್ಷ್ಮಿಯ ಅಪ್ಪ.

ಮನೆ ಹಿತ್ತಿಲು ಹೊಲಗಳನ್ನು ಸಂಪಾದಿಸಲು ಮಾತ್ರ ರಂಗಣ್ಣನಿಗೆ ಸಾಧ್ಯವಾಗಲಿಲ್ಲ. ಅವನು ಆಗಾಗ ಲಕ್ಷ್ಮಿಯನ್ನು ಸಂಧಿಸಿ, "ಇನ್ನು ನಮ್ಮ ಮದುವೆ ಹೇಗೆ?" ಎಂದು ಕೇಳುತಿದ್ದ. ಲಕ್ಷ್ಮಿ ತನ್ನ ತಂದೆಯ ಮಾತನ್ನೆ ಜ್ಞಾಪಕಪಡಿಸುವಳು. ರಂಗಣ್ಣ ತಲೆಬಾಗಿಕೊಂಡು ಹೊರಟುಹೋಗುತಿದ್ದ. ಈ ವಿವಾಹ ವಿಷಯವೆಲ್ಲಾ ಸೋಮಣ್ಣನಿಗೆ ತಿಳಿಯಿತು.



ಅವನು ಒಬ್ಬನೇ ಲಕ್ಷ್ಮಿಯ ಮನೆಗೆ ಹೋಗಿ "ನೀನೂ ರಂಗಣ್ಣನೂ ಮದುವೆಯಾಗುವಿರಂತಲ್ಲಾ! ನಾ ಕೇಳಿದೆಬಿಡೂ. ಒಳ್ಳೆಯ ಸಂಬಂಧ!" ಎಂದ.

"ಎಂಥ ಮದುವೆಯೊ! ನಾನು ಬದುಕಿರುವುದರೊಳಗೆ ಆಗುವಂತೆ ಕಾಣದು" ಎಂದು ಲಕ್ಷ್ಮಿ ಎಲ್ಲ ಸಂಗತಿ ಅವನಿಗೆ ಹೇಳಿದಳು.

ಸೋಮಣ್ಣ ಆಶ್ಚರ್ಯ ನಟಿಸುತ್ತಾ, "ಈ ಭಾಗ್ಯಕ್ಕೆ ಮದುವೆ ಮುಂದೆ ಹಾಕಬೇಕೆ? ಎರಡು ನೂರು ಬಿಸಾಕಿದರೆ ಒಂದು ಮನೆ ಹಿತ್ತಿಲು ಬರೋದಿಲ್ಲವೆ?" ಎಂದ.

"ಅದಿಲ್ಲದೆತಾನೇ ಈ ಅವಸ್ಥೆ!" ಎಂದಳು ಲಕ್ಷ್ಮಿ ವಿಚಾರದಿಂದ. "ಇಲ್ಲಾಂದರೇನು? ನೀನೂ ಬಹಳ ಅಮಾಯಕಳೇ! ರಂಗಣ್ಣನ ಹತ್ತಿರವಿದೆಯಲ್ಲಾ, ಆ ಬಿಳೀಟಗರನ್ನು ನನಗೆ ಮಾರಲಿಕ್ಕೆ ಹೇಳು. ಈ ಕ್ಷಣದಲ್ಲಿ ಇನ್ನೂರು ಸುರಿಸುತ್ತೇನೆ" ಎಂದು ಸೋಮಣ್ಣ ಟೊಂಕದ ಸಂಚಿಯನ್ನು ಗಲಗಲ್ಲಾಡಿಸಿದ.

ಹಣದ ಸದ್ದು ಕೇಳಿ ಲಕ್ಷ್ಮಿಗೆ ಆಶೆ ಒಸರಿತು. ಆದರೂ ಯೋಚನೆಮಾಡುತ್ತ, "ಅದು ಜಮೀನುದಾರರ ಟಗರಲ್ಲವೆ? ರಂಗಣ್ಣ ಹೇಗೆ ಮಾರುತ್ತಾನೆ?" ಎಂದಳು.

"ಅದೇ ನಿನ್ನ ಹುಚ್ಚು ತಿಳುವಳಿಕೆ! ಅದು ರಂಗಣ್ಣ ಸಾಕಿದ ಟಗರು. ಯಾವ ಲೆಕ್ಕದಲ್ಲಿ ಜಮೀನುದಾರರಿಗಾಗುತ್ತಂತೆ? ಅದನ್ನು ನಿನಗೆ ಬಹುಮಾನವಾಗಿ ಕೊಡಲಿಕ್ಕೆ ರಂಗಣ್ಣನಿಗೆ ಹೇಳು. ಅದು ನಿನ್ನದಾದಮೇಲೆ ನನಗೆ ಮಾರು. ಇಕೋ, ಮೊದಲೇ ಹಣ ತಕ್ಕೋ!" ಎಂದ ಸೋಮಣ್ಣ.

ಸೋಮಣ್ಣನ ಮೋಸವು ಲಕ್ಷ್ಮಿಯಮೇಲೆ ಚೆನ್ನಾಗಿ ನಾಟಿತು. ಆ ದಿನ ಸಾಯಂಕಾಲ ರಂಗಣ್ಣ ಅವಳೊಂದಿಗೆ ಮಾತಾಡಲು ಬಂದಾಗ "ನಮ್ಮ ಮದುವೇ ಮಾತು ಏನಾಯಿತು ಲಕ್ಷ್ಮೀ?" ಎಂದ. "ನಿನ್ನ ಕೈಯಲ್ಲೇ ಉಂಟು!" ಎಂದಳು ಲಕ್ಷ್ಮಿ.

ರಂಗಣ್ಣ ಆಶ್ಚರ್ಯದಿಂದ "ನನ್ನ ಕೈಯಲ್ಲಿದ್ದರೆ ಎಂದೋ ಮನೆಯೂ ಹಿತ್ತಿಲೂ ಸಂಪಾದಿಸದೆ ಬಿಡುತ್ತಿದ್ದೆನೆ?" ಎಂದ.

"ನಿನ್ನ ಟಗರಿಗೆ ಒಳ್ಳೆಯ ಗಿರಾಕಿ ಬಂದಿದೆ. ಅದನ್ನು ಮಾರು. ನಮಗೆ ಮನೆಯೂ ಹಿತ್ತಿಲೂ ಬರುತ್ತದೆ. ಮತ್ತೇನು? ನಮ್ಮ ಮದುವೆಯೂ



ಕೂಡಲೇ ನಡೆಯುತ್ತದೆ" ಎಂದಳು ಲಕ್ಷ್ಮಿ. "ಮಾರಲಿಕ್ಕೆ ಆ ಟಗರು ನನ್ನ ಸೊತ್ತೆ? ನೀನು ತಪ್ಪಾಗಿ ತಿಳಿದಿದ್ದಿ. ಈ ಆಲೋಚನೆ ಮರೆತುಬಿಡು. ನಮ್ಮ ಮದುವೆ ಆಗದೇಹೋದರೆ ಹೋಗಲಿ, ಹೊರತು ನಾನುಮಾತ್ರ ಆ ಟಗರನ್ನು ಮಾರಲಾರೆ" ಎಂದ ರಂಗಣ್ಣ.

ಲಕ್ಷ್ಮಿ ಮುಖಬಾಡಿಸಿಕೊಂಡು, "ಹೋಗಲಿ, ನೀನು ಮಾರಬೇಡ. ನಾನೀಗ ಬಾಯಿಬಿಟ್ಟೇ ಕೇಳುತ್ತೇನೆ, ನನಗೆ ಅದನ್ನು ಬಹುಮಾನವಾಗಿ ಕೊಡು" ಎಂದಳು.

ರಂಗಣ್ಣನ ಮುಖದಲ್ಲಿ ಬಹಳ ಬಾಧೆಯ ಛಾಯೆ ಕಾಣಿಸಿತು. "ಲಕ್ಷ್ಮೀ, ನನ್ನ ಪ್ರಾಣ ಬೇಕಾದರೂ ಕೊಟ್ಟೇನಾಗಲೀ ಆ ಟಗರನ್ನು ಕೊಡಲಾರೆ! ವ್ಯತ್ಯಾಸವಾಗಿ ತಿಳೀಬೇಡ" ಎನ್ನುತ್ತಾ ಹೊರಟುಹೋಗಲು ತಿರುಗಿದ.

ಲಕ್ಷ್ಮಿ ಕಣ್ಣೀರು ಸುರಿಸುತ್ತಾ ಅವನನ್ನು ಹಿಂದೆ ಕರೆದು, "ನನಗೆ ನೀನು ಇಷ್ಟು ಅನ್ಯಾಯ ಮಾಡುತ್ತಿ ಅಂತ ತಿಳಿಯಲೇ ಇಲ್ಲ. ನಾನು ಕೇಳಿದರೆ ನೀನು ಕೊಡುತ್ತಿ ಅಂತ ನಿನ್ನನ್ನು ನಂಬಿ ಆ ಟಗರಿಗೆ ಒಂದು ಗಿರಾಕಿ ಹಿಡಿದು ಹಣಕೂಡಾ ಮೊದಲೇ ತೆಗೆದುಕೊಂಡುಬಿಟ್ಟೆ. ನನ್ನ ಮರ್ಯಾದೆ ಹೋಗುವ ಹಾಗಾಯ್ತು!" ಎನ್ನುತ್ತಾ ರಂಗಣ್ಣನಿಗೆ ರೂಪಾಯಿಯ ಸಂಚಿಯನ್ನು ತೋರಿಸಿದಳು.

ರಂಗಣ್ಣ ದಿಗ್ಭ್ರಾಂತನಾಗಿ ಕ್ಷಣತಾಳಿ, "ನಿನಗೆ ಈ ಹಣ ಕೊಟ್ಟದ್ದು ಯಾರು?" ಎಂದು ಕೇಳಿದ. "ಕರೇಪಾಳ್ಯ ಜಮೀನುದಾರರ ಆಳು



ಸೋಮಣ್ಣ" ಎಂದಳು ಲಕ್ಷ್ಮಿ. ಇದನ್ನು ಕೇಳಿ ರಂಗಣ್ಣ ಸ್ವಲ್ಪ ಹೊತ್ತು ಆಲೋಚನೆ ಮಾಡಿದ. ಅನಂತರ ಹಲ್ಲುಕಚ್ಚಿ ತಲೆಮೂಗಿ ಏನೋ ಒಂದು ನಿರ್ಧಾರಕ್ಕೆ ಬಂದ. "ನಿನ್ನ ಮರ್ಯಾದೆ ನಾನೇಕೆ ತೆಗೆಯಲಿ ಲಕ್ಷ್ಮಿ? ಪ್ರಾಣಹೋದರೂ ಮಾತುಹೋಗಬಾರದು. ನಾಳೆ ಮಧ್ಯಾಹ್ನದೊಳಗೆ ಆ ಟಗರನ್ನು ನಿನಗೆ ಕೊಡುತ್ತೇನೆ. ನಿನ್ನ ಮಾತನ್ನು ನೀನು ಉಳಿಸಿಕೊ" ಎಂದ.

ಮರುದಿನ ಸಾಯಂಕಾಲದೊಳಗೆ ಬಿಳೀಪಾಳ್ಯದ ಜಮೀನುದಾರರ ಟಗರು ಕರೇಪಾಳ್ಯದ ಜಮೀನುದಾರರ ಪರವಾಗಿ ಹೋಯಿತು.

ಆ ಸಾಯಂಕಾಲ ಇಬ್ಬರು ಜಮೀನುದಾರರೂ ಯಥಾಪ್ರಕಾರ ಅಂಗಳದಲ್ಲಿ ಕುಳಿತು

ಕೊಂಡಿರುವಾಗ, ರಂಗಣ್ಣ ಪಶುಗಳ ಮಂದೆಯನ್ನು ಹೊಡೆದುಕೊಂಡು ಬಂದ. ಆಗ ಬಿಳೀಪಾಳ್ಯದ ಜಮೀನುದಾರ ಜೇಬಿನಿಂದ ಕಳ್ಳೇಕಾಯಿ ತೆಗೆದು ಬಾಯಿಗೆ ಹಾಕುತ್ತಾ, ಹಸುಗಳ ಮಂದೆಯನ್ನು ನೋಡಿ "ಟಗರೆಲ್ಲೋ ರಂಗಣ್ಣಾ?" ಎಂದು ಕೇಳಿದ.

"ಅದನ್ನು ಮಾರಿಬಿಟ್ಟೆ, ದ್ಯಾವ್ರೂ" ಎಂದ ರಂಗಣ್ಣ ಸ್ವಲ್ಪವೂ ತಡೆಯದೆ.

ಜಮೀನುದಾರ ಸ್ವಲ್ಪಹೊತ್ತು ಬೆರಗಾಗಿ, "ಏನೋ ಇದು ರಂಗಣ್ಣಾ? ನನ್ನೊಡನೆ ಹೇಳದೇನೇ ಏಕೆ ಮಾಡಿದಿ ಇಂಥ ಕೆಲಸ? ಏನಾಯಿತು ನಿನಗೆ?" ಎಂದು ಕೇಳಿದ.

"ದ್ಯಾವ್ರೂ! ಅವಸರಮಾಡಿ ನನ್ನನ್ನೇನೂ ಬಯ್ಯಬೇಡಿ. ನಾನು ಮದುವೆ ಮಾಡಿಕೊಳ್ಳಬೇಕೆಂಬ ಹುಡುಗಿ ಲಕ್ಷ್ಮಿಯ ಮೂಲಕವಾಗಿ ಹೊಂಡಕ್ಕೆ ಬಿದ್ದೆ. ಅವಳನ್ನು ಹಳ್ಳಕ್ಕೆ ದೂಡಿದ ದುಷ್ಟ ಇನ್ನೊಬ್ಬನಿದ್ದಾನೆ. ಅವನು ಮರ್ಯಾದೆಯಿಂದ ಆ ಟಗರನ್ನು ತಿರುಗಿಕೊಟ್ಟರೆ ನಾನು ಅವನ ಹೆಸರು ಹೇಳುವುದಿಲ್ಲ" ಎನ್ನುತ್ತಾ ರಂಗಣ್ಣ ಸೋಮಣ್ಣನ ಕಡೆಗೆ ಒಮ್ಮೆ ನೋಡಿದ. ಅನಂತರ ಸೋಮಣ್ಣನ ಹೆಸರು ಹೇಳದೆ ನಡೆದ ಸಂಗತಿಯನ್ನೆಲ್ಲಾ ಹೇಳಿದ.

ಎಲ್ಲಾ ಕೇಳಿ ಕರೇಪಾಳ್ಯದ ಜಮೀನುದಾರ ಸೋಮಣ್ಣನ ಕಡೆಗೆ ಸಿಟ್ಟಿನಿಂದ ನೋಡಿ ಹಲ್ಲು ಕಡಿಯುತ್ತ, "ಮುಟ್ಠಾಳಾ! ನಾನು ನಿನಗೆ ಹೇಳಿದ್ದೇನು ನೀನು ಮಾಡಿದ್ದೇನು? ಇದೋ ನೀನು ಮಾಡಿದ ಘನಕಾರ್ಯ? ಪಂದ್ಯದಲ್ಲಂತೂ ನಾನು ಸೋತೇಬಿಟ್ಟೆ. ರಂಗಣ್ಣನಿಂದ ಸುಳ್ಳಾಡಿಸಲಾಗದೇ ಹೋಯಿತು. ನಿಜಕ್ಕೂ ರಂಗಣ್ಣ ನಂಬಿಗಸ್ಥ. ಅವನಿಗೆ ಟಗರನ್ನು ಕೂಡಲೇ ತಿರುಗಿ ಕೊಟ್ಟುಬಿಡು. ರಂಗಣ್ಣಾ, ಲಕ್ಷ್ಮಿಗೆ ಕೊಟ್ಟ ಇನ್ನೂರು ರೂಪಾಯಿಯನ್ನು ನೀನೇ ಇಟ್ಟುಕೊಂಡು ಮನೆಯೂ ಹಿತ್ತಿಲೂ ಸಂಪಾದಿಸಿಕೋ. ನೀವಿಬ್ಬರೂ ಮದುವೆಯಾಗಿ ಸುಖವಾಗಿರಿ!" ಎಂದ.

ಬಿಳೀಪಾಳ್ಯದ ಜಮೀನುದಾರನೂ ರಂಗಣ್ಣನ ಮದುವೆಗೆ ಎಲ್ಲಾ ವಿಧ ಸಹಾಯವನ್ನೂ ಮಾಡಿದ. ಅವರಿಬ್ಬರು ಜಮೀನುದಾರರ ಪಂಥದಿಂದಾಗಿ ಲಕ್ಷ್ಮೀ ರಂಗಣ್ಣರ ಮದುವೆ ಬಹಳ ವೈಭವದಿಂದಲೇ ಜರುಗಿತು.





# ಮಿತ್ರಭೇದ

ಕೆಳ್ಳ ಕೊಕ್ಕರೆಯ ಮಾ
ತನು ನಂಬಿ ಏಡಿ
ಎಲ್ಲ ಏಡಿಗಳನ್ನು
ಕರಕೊಂಡು ಬಂದು
ಬೇಡಿಕೊಂಡಿತು ಹೀಗೆ :
" ಬಕ ಮಹಾತುಮರೇ!
ನಮ್ಮೆಲ್ಲರನು ನೀವೆ
ಕಾಪಾಡಬೇಕೈ !"
ಹೀಗೆಂದಿತಾ ಬಕವು :
" ಆ ಕೊನೆಯ ಲೊಂದು
ಹಿರಿ ಸರೋವರ ವುಂಟು
ಕೊಂಡೊಯ್ವೆ ನಲ್ಲಿ
ನೀರು ಬತ್ತುವುದೆಂಬ
ಭಯವಿಲ್ಲ ವಲ್ಲಿ"
ಒಪ್ಪಿ ಜಲಚರಗ
ಳೊಂದೊಂದಾಗಿ ಬಕದ
ಹೇಗಲೇರಲಾ ಬಕವು
ಹೊತ್ತುಕೊಂಡೊಯ್ದು

ಹೆಬ್ಬಂಡೆ ಮೇಲ್ ಕುಳಿತು
ತಿನುತಿತ್ತು ಹೀಗೇ
ನಿತ್ಯ ಮೀನೇಡಿಗಳ
ಫಳಹಾರವಾಗಲ್,
ಹಿರಿಯೇಡಿ ಒಂದು ದಿನ
ಕೊಕ್ಕರೆಯ ಹೆಗಲೊಳ್
ಹಾರುತಿರೆ, ಬಂಡೆಯಲಿ
ಕಂಡೆಲುಬುರಾಶಿ
ಅಲ್ಲೆ ಬಕವಿಳಿಯುತಿರೆ
ತಿಳಿಯಿತದಕೆಲ್ಲ
" ಇಲ್ಲೆಲ್ಲಿ ಕೊಳವೆಂ"ದು
ಕೇಳಲಾ ಬಕವು
ನಕ್ಕು ನುಡಿಯಿತು : " ಮಕ್ಕೆ
ಇಲ್ಲ ಕೊಳಗಿಳವು!
ನನ್ನ ಹೊಟ್ಟೆಯವೊಳಗೆ
ಸುಖವಾಗಿರೆ" ನಲು
ಒಡನೆ ಬಿಗಿಯಿತು ಏಡಿ
ಕೊಕ್ಕರೆಯ ಕೊರಳು!

ಟಿ. ಎ. ಶರ್ಮ





ಕಥೆಕೇಳಿ ಇದರಲ್ಲಿ
ನಂಬುಗೆಯ ತಾಳು.
ಹಿಂದೊಂದು ವನದಲ್ಲಿ
ಸಿಂಹ ವೊಂದಿತ್ತು.
ಕಂಡಕಂಡಲ್ಲಿ ಮೃಗ
ಗಳಕೊಲ್ಲು ತಿತ್ತು.
ಹೀಗಾದ ರಡವಿಯಲಿ
ಮೃಗಜಾತಿಯೆಲ್ಲಾ
ಬೇಗ ನಶಿಸುವುದೆಂದು
ಸೇರಿಕೊಂಡೆಲ್ಲಾ
ಸಿಂಹದ ಬಳಿಗೆ ಹೋಗಿ
"ಸ್ವಾಮಿ ಮೊರೆಕೇಳಿ,
ದಿನಕೆ ಒಂದೊಂದು ಮೃಗ
ಕಳಿಸುವೆವು ನಿಮಗೆ.
ನೀವು ಹಸಿವೆಯ ತಣಿಸಿ
ಮೃಗಗಳನು ಉಳಿಸಿ,
ನೀವ್‌ಬಾಳಿ ನಮ್ಮನೂ
ಬದಕಿಸಿರಿ" ಎನುತ
ಬೇಡಿಕೊಳ್ಳಲು ಒಪ್ಪಿ
ತಾ ಸಿಂಹ ಹಾಗೇ.
ದಿನ ನಿತ್ಯವನದ ಮೃಗ
ವೊಂದು ಬರುತಿತ್ತು.
ಹೀಗಿರಲು ಒಮ್ಮೆ ಮೊಲ
ಕೂ ಸರದಿ ಬಂತು.
ಅದು ದೊರೆಯ ಬಳಿಗೆ ಬರು
ತಿರಲು ದಾರಿಯಲಿ

ಸಾಯಲಾ ಕಳ್ಳ ಬಕ,
ಏಡಿ ಸುಖವಾಗಿ
ಕೊಳಸೇರಿ ಬದುಕಿಕೊಂ
ಡಿತ್ತು ಬಹುಕಾಲ.
ನೋಡಿದೆಯ ಕರಟಕಾ
ಎಚ್ಚರಿಕೆಯಿರಲು
ಬುದ್ಧಿ ಮಿಂಚುವುದೊಡನೆ
ಹಗೆಗಳನು ಕೊಲಲು.
ದೇಹ ಬಲಕಿಂತಲೂ
ಬುದ್ಧಿ ಬಲ ಮೇಲು.
ಬುದ್ಧಿ ಹೀನನ ಭಾರಿ
ದೇಹಬಲ ವಿಫಲ.
ಮದಿಸಿದಾ ಸಿಂಹವನು
ಮೊಲವೊಂದು ಕೊಂದ

ಬಾವಿಯೊಂದನು ಕಂಡು
ಪಡಿನೆರಳ ನೋಡಿ
ಒಂದು ಪಾಯವು ಮಿಂಚಿ
ತದರ ಮಿದುಳಿನಲಿ.
ಹೊತ್ತುಮಾಲುವ ವರೆಗೆ
ಅಲ್ಲಲ್ಲಿ ತಿರುಗಿ
ಮತ್ತೆ ಬರಲಾ ಸಿಂಹ
ತಡವೇಕೆಯೆನುತ
ಗರ್ಜಿಸಲ್, ಮೊಲ ನುಡಿಯಿ
ತಿಂತು ವಿನಯದಲಿ,
" ಕ್ಷಮಿಸಿ ಸ್ವಾಮಿಾ, ಯೆನ್ನ
ಕಿರಿಯ ಮೈ ನಿಮಗೆ
ಸಾಲದೆಂ ದಿನ್ನೈದು
ಮೊಲಗಳೊಡ ಗೂಡಿ
ಬರುವಾಗ ದಾರಿಯಲಿ
ಇನ್ನೋರ್ವ ಸಿಂಹ
ತಡೆದು ನಿಲ್ಲಿಸಿತಾನೆ
ಈ ವನದರಾಜ
ಅವನಾರು ಹೋಗು ಕರೆ
ತಾರೆಂದ ನೆನಗೆ.
ನಾಲ್ಕು ಮೊಲಗಳನವನೆ
ತಿಂದಾಯ್ತು ದೊರೆಯೇ!"
ಕೇಳಿ ರೋಷದಿ ಸಿಂಹ
" ಎಲ್ಲಿರುವನಾತ?
ಅವನ ವಧಿಸಿದಮೇಲೆ
ಮರುಕಾರ್ಯ" ವೆನಲು,



" ಆ ಸಿಂಹ ಸಾಮಾನ್ಯ
ನಲ್ಲ ಓ! ದೊರೆಯೆ!
ಎಚ್ಚರಿಕೆ ಬೇಕೈಯ"
ಎಂದು ಸಿಂಹವನು
ತುಂಬ ಕೆರಳಿಸಿ ಮೊಲವು
ಬಾವಿಬಳಿಗೊಯ್ದು
ಇದರೊಳಗೆ ಅಡಗಿರುವ
ನೆಂದು ತೋರಿಸಿತು.
ನಿಜನೆರಳನೂ ತನ್ನ
ಪಡಿಗರ್ಜನೆಯನೂ
ಕಂಡು ತನ್ನಿದಿರಾಳಿ
ನಿಜವೆಂದು ಭ್ರಮಿಸಿ
ಕೆರಳಿ ಬಾವಿಗೆ ಧುಮುಕಿ
ಸತ್ತಿತಾ ಸಿಂಹ!

# ನಾವಿಕ ಸಿಂದಬಾದ್

ನಾನು ಮಾಡಿದ ನಾಲ್ಕು ಸಮುದ್ರಯಾನಗಳೂ ನನಗೆ ಅಪರಿಮಿತ ಲಾಭಗಳನ್ನು ತಂದುಕೊಟ್ಟುವು. ಎಷ್ಟು ಕಷ್ಟ ಗಳನ್ನು ಪಟ್ಟರೂ ನನಗೆ ಈ ಪ್ರಯಾಣಗಳು ಕೂಡಿಬರುತ್ತ ದೆಂದೂ, ಅನುಭವಗಳಿಸಿಕೊಡುತ್ತದೆಂದೂ ನನಗೆ ಧೈರ್ಯ ಬಂತು. ಸ್ವಲ್ಪಕಾಲ ಸಕಲ ವೈಭೋಗಗಳನ್ನು ಅನುಭವಿ ಸುತ್ತ ಮನೆಯಲ್ಲಿ ಕಳೆದನಂತರ ನಾನು ಮತ್ತೆ ಐದನೇ ಪ್ರಯಾಣಕ್ಕೆ ಸಿದ್ಧನಾದೆ.

ಅದಕ್ಕಾಗಿ ಪೇಟೆಗೆ ಹೋಗಿ ಲಾಭ ಗಳಿಸಿಕೊಡುವಂತಹ ಸರಕುಗಳನ್ನು ಕೊಂಡುಕೊಂಡು ಬೇಲುಕಟ್ಟಿಸಿ ಅವುಗ ಳೊಂದಿಗೆ ಬಸ್ರಾಕ್ಕೆ ಸೇರಿದೆ. ನಾನು ಅಲ್ಲಿಯ ರೇವನ್ನು ಸೇರಿದಾಗ ಅಲ್ಲೊಂದು ಹೊಸಾ ನೌಕೆ ಮಾರಾಟಕ್ಕೆ ಸಿದ್ಧ ವಾಗಿತ್ತು. ಅವನ್ನು ಕಂಡು ನನಗೆ ಬಹಳ ಆನಂದ ವಾಯಿತು. ಒಡನೆಯೇ ಬೇರ ನಡೆಸಿ ಆ ನೌಕೆಯನ್ನು ಕೊಂಡುಕೊಂಡುಬಿಟ್ಟೆ. ತರುವಾಯ ಒಳ್ಳೆಯ ಅನುಭವ ವುಳ್ಳ ಸರಂಗನನ್ನೂ, ಸಮರ್ಥರಾದ ಕಳಾಸಿಗಳನ್ನೂ ಸಂಬಳಕ್ಕೆ ಏರ್ಪಡಿಸಿಕೊಂಡು, ನನ್ನ ಬಾನಿಸರಿಂದ ನನ್ನ ಸರಕುಗಳನ್ನು ನೌಕೆ ಗೇರಿಸಿದೆ. ಈ ಬಾನಿಸರನ್ನು ಪ್ರಯಾಣ ದಲ್ಲಿ ನನ್ನ ಜತೆಗಿರಬೇಕೆಂದು ಮನೆಯಿಂದಲೇ ಕರೆತಂದಿದ್ದೆ. ನಾನು ಹೊರಡಲಿರುವಾಗ ಕೆಲವು ವರ್ತಕರು ನನ್ನೊಂದಿಗೆ ಬರಲು ತವಕಪಟ್ಟು ಪ್ರಯಾಣದ ಖರ್ಚು ಮುಂದಾಗಿಯೇ

ಐದನೇ ಪ್ರಯಾಣ

CHITRA



ನನಗಿತ್ತರು. ಈ ಬಾರಿ ನೌಕೆ ನನ್ನದೇ ಆದ್ದರಿಂದ ನನ್ನ ಸರಂಗನಿಗೆ ನಾನೇ ಸರಿಯಾದ ಸಲಹೆಕೊಡ ಬಹುದಾಗಿತ್ತು. ಏಕೆಂದರೆ, ನನಗೆ ಇಷ್ಟರಲ್ಲಿ ಸಮುದ್ರಯಾನದ ವಿಷಯದಲ್ಲಿ ತುಂಬಾ ಅನುಭವವಾಗಿತ್ತು.

ನಾವು ಬಸ್ರಾದಿಂದ ಬಹಳ ಉತ್ಸಾಹದಿಂದ ಹೊರಟೆವು. ಗಾಳಿ ಅನುಕೂಲವಾಗಿತ್ತು. ನಮ್ಮ ನೌಕೆ ಅನೇಕ ರೇವುಗಳನ್ನು ತಲಪಿತು. ಪ್ರತಿ ರೇವಿನಲ್ಲಿಯೂ ಕ್ರಯವಿಕ್ರಯಗಳು ಸಕ್ರಮವಾಗಿಯೇ ಸಾಗಿತು. ಕಡೆಗೆ ಒಂದುಸಾರಿ ನಾವು ಒಂದಾನೊಂದು ನಿರ್ಜನವಾದ ದ್ವೀಪದ ಬಳಿಯಲ್ಲಿ ಲಂಗರು ಹಾಕಿದೆವು.



ವರ್ತಕರೆಲ್ಲಾ ಇಳಿದು ದ್ವೀಪದ ವಿಚಿತ್ರವನ್ನು ನೋಡಲು ಹೋದರು. ಅಲ್ಲಿ ಅವರಿಗೊಂದು ಗಂಡಭೇರುಂಡ ಪಕ್ಷಿಯ ಮೊಟ್ಟೆ ಕಾಣಿಸಿತು. ಆದರೆ ಅದು ಆ ಪಕ್ಷಿಯ ಮೊಟ್ಟೆಯೆಂದು ತಿಳಿಯದೆ ಅವರು ಅದರಮೇಲೆ ಕಲ್ಲು ಬಿಸಾಡಿದರು. ಮೊಟ್ಟೆ ಒಡೆದುಹೋಗಿ ಅದರೊಳಗಿನಿಂದ ಮರಿಹಕ್ಕಿಯ ಕಾಲು ಹೊರಗೆ ಕಾಣಿಸಿತು. ಏನೂ ಅರಿಯದ ಆ ವರ್ತಕರು ಬಹಳ ಸಂತೋಷದಿಂದ ಆ ಮರಿಯನ್ನು ಹೊರಕ್ಕೆಳೆದು ಅದನ್ನು ಕೊಯಿದು ತಲಾ ಒಂದೊಂದು ತುಂಡು ತೆಗೆದುಕೊಂಡು ನೌಕೆಗೆ ತಿರುಗಿಬಂದರು.

ಅವರು ಮಾಡಿದ ಕೆಲಸ ತಿಳಿದಕೂಡಲೇ ನನಗೆ ಹಿಡಿಸಲಾರದಷ್ಟು ಭಯವಾಯಿತು. "ನೀವು ಕೊಂಪೆ ಮುಳುಗಿಸಿದಿರಿ! ಆ ಮೊಟ್ಟೆಯನ್ನು ಇಟ್ಟ ಗಂಡಭೇರುಂಡ ದಂಪತಿಗಳು ಬೇಗನೇ ಬಂದು ಆದದ್ದು ನೋಡಿ ನಮ್ಮನ್ನು ಹತಮಾಡುತ್ತವೆ. ಈ ಅಪಾಯದಿಂದ ಪಾರಾಗಲು ಸಾಧ್ಯವಾದಷ್ಟು ಬೇಗ ಓಡಿಹೋಗುವುದಲ್ಲದೆ ಬೇರೆ ಮಾರ್ಗವೇ ಇನ್ನಿಲ್ಲ!" ಎನ್ನುತ್ತಾ ಗಬಗಬನೆ ತೆರೆಚಾಪೆಗಳನ್ನೆತ್ತಿಸಿ ನೌಕೆಯನ್ನು ಸಮುದ್ರದ ಕಡೆಗೆ ಓಡಿಸಿದೆ.

ಇಷ್ಟರೊಳಗೆ ವರ್ತಕರು ಧೈರ್ಯವನ್ನು ತಂದುಕೊಂಡರು. ತಾವು ತಂದ ಹಕ್ಕಿಯ ಚೂರುಗಳನ್ನು ಬೇಯಿಸಿಕೊಂಡರು. ಆದರೆ ಅವರು ಅದನ್ನು ತಿನ್ನುವಷ್ಟರೊಳಗೇ ಆಕಾಶದಲ್ಲಿ ಸೂರ್ಯನಿಗೆ ಎರಡು ಮೇಘಗಳು ಅಡ್ಡಬಂದ ಹಾಗಾಯಿತು. ಅವು ನಮ್ಮನ್ನು ಸಮೀಪಿಸುವಾಗ ಗಂಡಭೇರುಂಡಗಳೆಂದು



ಸ್ಪಷ್ಟವಾಯಿತು. ಅವುಗಳ ರೆಕ್ಕೆಗಳ ಸಪ್ಪಳವೂ ಕರ್ಕಶಕೂಗಾಟವೂ ಕೇಳುವಾಗ ಆಕಾಶವೇ ಗರ್ಜಿಸಿ ಬೀಳುವಂತಾಯಿತು. ಎಲ್ಲರೂ ಜೀವ ಬಿಡುವವರಹಾಗೆ ಚಡಪಡಿಸಿದರು. ಅವು ನಮ್ಮ ನೌಕೆಯಮೇಲೆ ಹಾರಿಬಂದಾಗ ಅವುಗಳ ಕಾಲ ಬೆರಳಿನಲ್ಲಿ ಬ್ರಹ್ಮಾಂಡ ದಂಥ, ನಮ್ಮ ನೌಕೆಗಿಂತಲೂ ದೊಡ್ಡ ಕಲ್ಲುಗಳು ಕಂಡು ಬಂದುವು. ನಮ್ಮ ವರ್ತಕರು ತಮಗೆ ಮಾಡಿದ ದ್ರೋಹಕ್ಕೆ ಅವು ಹೇಗೆ ಹಗೆ ತೀರಿಸುತ್ತವೆಂದು ತಿಳಿದು ಹೋಯಿತು ನಮಗೆ.

ನೋಡುವಾಗಲೇ ಒಂದು ಪಕ್ಷಿ ಕಾಲಲ್ಲಿ ಸಿಕ್ಕಿಸಿಕೊಂಡ ಮಹಾಬಂಡೆಯನ್ನು ನಮ್ಮ ನೌಕೆಯಮೇಲೆ ಬಿಟ್ಟಿತು. ನಮ್ಮ ಜಾಣನಾದ ಸರಂಗ ಬಹಳ ಚಾತುರ್ಯದಿಂದ ಚುಕ್ಕಾಣಿ ತಿರುಗಿಸಿ ನೌಕೆಯನ್ನು ಕಾಪಾಡಿದ. ಅದು ನಮ್ಮ ಬದಿಯಲ್ಲೇ ಸಮುದ್ರದಲ್ಲಿ ಬಿತ್ತು. ಅದು ಬಿದ್ದಲ್ಲಿ ಎಷ್ಟು ದೊಡ್ಡ ಹಳ್ಳ ತೋರಿತೆಂದರೆ ಸಮುದ್ರದ ನೆಲವೇ ಕಣ್ಣಿಗೆಬಿತ್ತು! ಆಗ ಎದ್ದ ಪರ್ವತಾಕಾರದ ಅಲೆಗಳ ಮೂಲಕ ನಮ್ಮ ನೌಕೆ ಬೆಂಡಿನ ಹಾಗೆ ಓಲಾಡಿತು.

ಇಷ್ಟರಲ್ಲಿ ಎರಡನೇ ಪಕ್ಷಿ ಎರಡನೇ ಬಂಡೆಯನ್ನು ಹೊತ್ತುಹಾಕಿತು. ಅದರ ಏಟಿಗೆ ನೌಕೆಯ ಅರ್ಧಭಾಗವು ಚೂರುಚೂರಾಗಿ ಹೋಯಿತು. ಆ ಏಟಿಗೆ ಜಜ್ಜಿಹೋಗಿ ಉಳಿದವರೆಲ್ಲಾ ಸಮುದ್ರದ ಪಾಲಾದೆವು. ನಾನು ಪ್ರಾಣ ವುಳಿಸಿಕೊಳ್ಳಲು ವಿಶ್ವಪ್ರಯತ್ನ ಮಾಡುತ್ತಾ ಅದೃಷ್ಟವಶಾತ್ ಕೈಗೆ ಸಿಕ್ಕಿದ ಒಂದು ಮರದ ತುಂಡನ್ನು ಸಂಪಾದಿಸಿ ಅದರ



ಸಹಾಯದಿಂದ ತೇಲಾಡಿದೆ. ಬಹಳ ಕಷ್ಟಪಟ್ಟು ಅದರ ಮೇಲೆ ಏರಿ ಕುಳಿತು ಕಾಲಿಂದಲೇ ಹುಟ್ಟು ಹಾಕುತ್ತಾ ಗಾಳಿಯ ಸಹಾಯ ದಿಂದಲೂ ಅಲೆಗಳ ಸಹಾಯದಿಂದಲೂ ಗುಟುಕ ಜೀವದಿಂದ ಯಾವುದೋ ಒಂದು ದ್ವೀಪದ ಮೇಲೆ ಹೋಗಿ ಬಿದ್ದೆ. ಒಂದುಗಂಟೆ ಹೊತ್ತು ಮರಳಿನಲ್ಲಿ ಬಿದ್ದುಕೊಂಡಿದ್ದ ಮೇಲೆ ಗುಂಡಿಗೆ ಹೊಡೆಯುವುದು ಸ್ವಲ್ಪ ಕಡಮೆಯಾಯಿತು. ಶಕ್ತಿ ಸ್ವಲ್ಪ ಕೂಡಿಬಂತು. ಆಗ ನಾನು ಎದ್ದು ಆ ದ್ವೀಪವನ್ನು ಪರೀಕ್ಷಿಸಲು ಹೊರಟೆ.

ಅದು ನಿಜಕ್ಕೂ ಭೂಸ್ವರ್ಗದ ಹಾಗಿತ್ತು. ಎಲ್ಲಿ ನೋಡಿದರೂ ಹಸಿರು ಮರಗಳು, ಅವುಗಳ ತುಂಬಾ ಹಣ್ಣುಗಳು. ಮರಗಳ ಮೇಲೆ ಬಣ್ಣ ಬಣ್ಣದ ಹಕ್ಕಿಗಳು ಕಲಕಲವಾಡುತಿದ್ದುವು. ನೆಲ ದಲ್ಲೆಲ್ಲಾ ಹೂವಿನ ಹುಲ್ಲುಗಿಡಗಳು ಬಣ್ಣದ ಜಮಖಾನೆಯನ್ನು ಹಾಸಿದಹಾಗಿದೆ. ಅವುಗಳ ವಾಸನೆ ಕಮ್ಮಗೆ ಸುವಾಸನೆ! ನಾನು ವೃಥಾ ಕಾಲಹರಣ ಮಾಡದೆ ಕೂಡಲೇ ಹಣ್ಣು ಕೊಯಿದು ತಿಂದು ನಿರ್ಮಲವಾದ ನೆಲದೊರ ತೆಯ ನೀರು ಕುಡಿದು ಹೂವಿನ ಹಾಸಿಗೆಯಂಥ ನೆಲದಮೇಲೆ ಮಲಗಿಕೊಂಡು ವಿಶ್ರಾಂತಿ ತೆಗೆದು ಕೊಂಡೆ. ನಿದ್ದೆ ಬಂತು.

ಕತ್ತಲೆಬೀಳುವ ಸಮಯಕ್ಕೆ ನನಗೆ ಎಚ್ಚ ರಾಯಿತು. ಆ ಪ್ರದೇಶವು ಮನೋಹರವಾ ಗಿದ್ದರೂ ಒಂಟಿಯಾಗಿ ಅಲ್ಲಿರುವುದೆಂದರೆ ನನಗೆ ತುಂಬಾ ಭಯವಾಯಿತು. ರಾತ್ರಿ ಸರಿಯಾಗಿ ನಿದ್ರೆಯೇ ಬರಲಿಲ್ಲ. ನಿದ್ರೆ ಬಂದಾಗ ಭಯಂಕರ ಸ್ವಪ್ನ ಕಾಣುತಿತ್ತು. ಹೇಗೋ ಬೆಳಗಾಯಿತು.







ಯಿಂದ ತಲೆ ತಿರುಗಿಸಿ, ತನ್ನನ್ನು ನನ್ನ ಭುಜಗಳ ಮೇಲೆ ಏರಿಸಿಕೊಂಡು, ಅಲ್ಲಿ ಕಾಣುವ ಕಾಲುವೆಯನ್ನು ದಾಟಿಸಬೇಕೆಂದು ಸನ್ನೆ ಮಾಡಿದ. ಅಲ್ಲಿ ಕಾಣುವ ಮರದ ಹಣ್ಣುಗಳನ್ನು ತಿನ್ನಬೇಕೆಂದು ಸೂಚಿಸಿದ.

ಈ ಹಣ್ಣು ಮುದುಕನಿಗೆ ಉಪಕಾರ ಮಾಡಿದರೆ ಆ ಪುಣ್ಯ ವ್ಯರ್ಥವಾಗದು ಎಂದುಕೊಂಡೆ. ನಾನು ಸಮೀಪಹೋಗಿ ಬಾಗಿ ಅವನನ್ನು ನನ್ನ ಭುಜಗಳಲ್ಲಿ ಏರಿಸಿಕೊಂಡೆ.

ಅವನು ತನ್ನ ತೊಡೆಗಳನ್ನು ನನ್ನ ಕೊರಳ ಸುತ್ತೂ ಹಾಕಿ ಕಾಲನ್ನು ಹಿಂದೆ ಹಾಕಿಕೊಂಡು ಎರಡು ಕೈಗಳಿಂದಲೂ ನನ್ನ ತಲೆಯನ್ನು ಬಿಗಿಹಿಡಿದನು. ನಾನು ಕಾಲುವೆಯನ್ನು ದಾಟಿ ಅವನು ತೋರಿಸಿದ ಸ್ಥಳದಲ್ಲಿ ಬಾಗಿ, "ಅಯ್ಯಾ! ಮೆಲ್ಲ ಇಳಿಯಿರಿ" ಎಂದೆ. ಆದರೆ ಆತ ಕದಲಲಿಲ್ಲ. ಬದಲಾಗಿ ಮತ್ತಷ್ಟು ಬಿಗಿಯಾಗಿ ನನ್ನ ಕೊರಳನ್ನು ತೊಡೆಗಳಿಂದ ಅಮುಕಿ ಮತ್ತಷ್ಟು ಭಾರವಾಗಿ ಕುಳಿತ.

ನನಗೆ ಆಶ್ಚರ್ಯವಾಯಿತು. ನಾನು ಅವನ ಕಾಲನ್ನು ಪರೀಕ್ಷೆಮಾಡಿ ನೋಡಿದಾಗ ಅವು ಕರ್ರಗಾಗಿ ರೋಮಗಳಿಂದ ಕೋಣನ ಕಾಲುಗಳ ಹಾಗಿವೆ. ನನಗೆ ಭಯವಾಯಿತು. ಅವನನ್ನು ಕೆಳಗೆ ಹಾಕಬೇಕೆಂದು ಪ್ರಯತ್ನಮಾಡಿದೆ. ಆತ ನನ್ನ ಕಂಠವನ್ನು ಮತ್ತಷ್ಟು ಬಿಗಿಯಾಗಿ ಅಮುಕಿದ. ನನಗೆ ಉಸಿರು ಸಿಕ್ಕಿ ಕಣ್ಣು ಕತ್ತಲೆಬರುವ ಹಾಗಾಯಿತು. ಅವನಿಂದ ಬಿಡಿಸಿಕೊಳ್ಳಲು ಕೊನೆಯ ಪ್ರಯತ್ನ ಮಾಡುತ್ತಾ ಕೂಡಲೇ

ನಾನು ಎದ್ದು ಒಂದೂ ತೋರದೆ ದ್ವೀಪದೊಳಗೆಲ್ಲಾ ಕಾಲು ಒಯ್ದ ಹಾಗೆ ತಿರುಗಾಡಿದೆ.

ಬೇಗದಲ್ಲೇ ನಾನೊಂದು ಮಡುವಿನ ಬಳಿಗೆ ಹೋದೆ. ಅದರಲ್ಲೊಂದು ಜಲಧಾರೆ ಬೀಳುತಿತ್ತು. ಮಡುವಿನ ಬದಿಯಲ್ಲಿ ಒಬ್ಬ ಮುದುಕ ಕುಳಿತಿದ್ದ. ಎಲೆಗಳನ್ನು ಚುಚ್ಚಿ ದುಪಟಿಯಂತೆ ಮಾಡಿಕೊಂಡು ಅದನ್ನು ಹೊದ್ದುಕೊಂಡಿದ್ದ. "ಯಾರೋ ನಾವಿಕನಾಗಿರಬೇಕು. ನೌಕೆಯ ಆಘಾತಕ್ಕೆ ಸಿಕ್ಕಿ ಬದುಕಿ ದಡ ಸೇರಿರಬೇಕು." ಎಂದುಕೊಂಡೆ.

ನಾನು ಮುದುಕನ ಬಳಿಗೆ ಹೋಗಿ ಮಾತಾಡಿಸಿದೆ. ಆ ಮುದುಕ ಸಂಜ್ಞೆಗಳಿಂದ ಮಾತ್ರ ಉತ್ತರವಿತ್ತ. "ಅಯ್ಯಾ, ನೀವಿಲ್ಲಿಗೆ ಹೇಗೆ ಬಂದಿರಿ?" ಎಂದು ಕೇಳಿದೆ. ಅವನು ಚಿಂತೆ

ಪ್ರಜ್ಞೆತಪ್ಪಿ ಬಿದ್ದೆ. ನಾನು ಮತ್ತೆ ಮೂರ್ಛೆ ತಿಳಿದಾಗಲೂ ಆ ಮುದುಕ ನನ್ನ ಭುಜಗಳ ಮೇಲೆಯೇ ಇದ್ದಾನೆ!

ಆದರೆ ತೊಡೆಯನ್ನು ಸ್ವಲ್ಪ ಸಡಲಿಸಿ ನನಗೆ ಶ್ವಾಸ ವಾಡಿಸಲು ಎಡೆಮಾಡಿ ಕೊಟ್ಟ. ನಾನು ಉಸಿರು ಬಿಡುವೆನೆಂದು ತಿಳಿದಕೂಡಲೇ ಆತ ಕಾಲುಗಳಿಂದ ನನ್ನ ಎದೆಯನ್ನು ಬಲವಾಗಿ ಒದ್ದ. ಎದ್ದು ನಿಂತೆ. ಆತ ಮುಂದು ಬಾಗಿ ಕೈ ಚಾಚಿ ಮುಂದೆ ನಡೆಯುವಂತೆ ಸನ್ನೆ ಮಾಡಿದ. ನಾನು ಹಾಗೇ ಹೋದೆ. ಆತ ಮರದ ಒಳ್ಳೊಳ್ಳೇ ಹಣ್ಣುಗಳನ್ನು ಕೈ ಚಾಚಿ ಕಿತ್ತು ಬೇಕಾದಹಾಗೆ ತಿಂದ. ನಾನು ಅವನಿಗಿಷ್ಟವಿಲ್ಲದಾಗ ನಿಂತರೂ, ಅವನಿಗೆ ಬೇಡದಾಗ ನಾನು ವೇಗವಾಗಿ ಹೋದರೂ ಆತ ನನ್ನ ಎದೆಯನ್ನು ಒದೆಯುತ್ತಾ ನನ್ನನ್ನು ತನ್ನಿಚ್ಛಾನುವಾಗಿ ನಡೆಸಿದ. ನಾನು ಅವನನ್ನು ಪಶುವಿನಹಾಗೇ ಹೊರಬೇಕಾಯಿತು. ಹೊತ್ತೆ. ರಾತ್ರಿ ಮಲಗಿದಾಗಕೂಡಾ ಆತ ನನ್ನ ಭುಜದಿಂದ ಇಳಿಯಲಿಲ್ಲ. ಬೆಳಗಾಗುತ್ತಲೇ ಮತ್ತೆ ನನ್ನನ್ನು ಒದ್ದು ಎಬ್ಬಿಸುತ್ತಿದ್ದ.

ಹಗಲೂ ರಾತ್ರಿಯೂ ನಾನು ಅವನನ್ನು ಹೊತ್ತೆ. ಕೈ ಕಾಲುಗಳಿಂದ ನನ್ನನ್ನು ಒದೆಯುತ್ತಾ ಅವನು ತನಗೆ ಬೇಕಾದ ಕೆಲಸಗಳನ್ನು ಮಾಡಿಸಿಕೊಂಡ. ಈ ಮುದಕನ ಸೇವೆಯಿಂದ ನಾನು ಪಟ್ಟ ಶರೀರ ಬಾಧೆಯನ್ನೂ ಅವಮಾನವನ್ನೂ ಜನ್ಮಜನ್ಮಾಂತರಕ್ಕೂ ಮರೆಯಲಾರೆ. ಯುವಕರಿಗೆಕೂಡಾ ಅವನಿಗಿರುವ ಶಕ್ತಿಯಿಲ್ಲ. ಕತ್ತೆಯನ್ನು ಹೊಡೆಯುವವರಿಗೆ ಕೂಡಾ ಅವನಷ್ಟು ದಯಾ ದಾಕ್ಷಿಣ್ಯ ವಿಲ್ಲದವಾರಾಗಿರುವುದಿಲ್ಲ. ಅವನಿಂದ ಬಿಡುಗಡೆ ಹೊಂದುವ ದಾರಿಯೇ ನನಗೆ ಕಾಣಲಿಲ್ಲ. "ಅಯ್ಯೋ! ಈ ಮುದಿ ಪ್ರಾಣಿಯಮೇಲೆ ನನಗೇಕೆ ಕನಿಕರ ಬಂತು? ಇದಕ್ಕಿಂತ ಸಾವಾದರೂ ಮೇಲಿತ್ತು!" ಎಂದು ಮನಸ್ಸಿನೊಳಗೇ ಚಿಂತಿಸುತ್ತಾ ಆತ ತಿರುಗಿಸಿದಂತೇ ತಿರುಗಿದೆ.



ಹೀಗೆ ಅನೇಕ ವಾರಗಳಾದುವು. ಒಂದು ದಿನ ನಾನು ಅವನನ್ನು ಹೊತ್ತುಕೊಂಡು ಹೋಗುವಾಗ ಕೆಂಪು ಸೊರೆಕಾಯಿಯ ಬೀಳಲು ಕಾಣಿಸಿತು. ಅವುಗಳಲ್ಲಿ ದೊಡ್ಡ ದೊಡ್ಡ ಕಾಯಿಗಳಿದ್ದುವು. ಅವುಗಳಲ್ಲಿ ದೊಡ್ಡದಾಗಿ ಒಣಗಿದ ಕಾಯಿಯನ್ನು ಆರಿಸಿ, ಅದನ್ನೊಡೆದು ಒಂದು ಬುರುಡೆ ತಯಾರುಮಾಡಿದೆ. ಅದರ ತುಂಬಾ

ದ್ರಾಕ್ಷೆಯ ರಸವನ್ನು ಹಿಂಡಿದೆ. ತರುವಾಯ ಅದರ ಮೂತಿಗೆ ಬಿರಡೆ ಹಾಕಿ ಬಿಸಿಲಿಗಿಟ್ಟೆ. ಕೆಲವು ದಿನಗಳಿಗೆ ಅದು ಹುಳಿತು ಸಾರಾಯಿಯಾಯಿತು. ಬಳಿಕ ಅವಕಾಶವಾದಾಗಲೆಲ್ಲಾ ಅದನ್ನು ಸ್ವಲ್ಪ ಸ್ವಲ್ಪ ಕುಡಿಯುತ್ತಾ ಬಂದೆ. ಅದನ್ನು ಕುಡಿದರೆ ಉತ್ಸಾಹದಿಂದ ಭುಜದ ಮೇಲಿನ ಭಾರವನ್ನು ಸುಲಭವಾಗಿ ಹೊರಬಹುದೆಂದು ನನ್ನ ಆಶೆ. ನಾನು ಪರಿಮಿತವಾಗೇ ಕುಡಿದುದರಿಂದ ಮೈ ಮರೆಯದೆ ಉತ್ಸಾಹಲಾಭ ಪಡೆದೆ. ನಾನು ಉತ್ಸಾಹದಿಂದ ಭುಜದಮೇಲಿನ ಭಾರದೊಂದಿಗೆ ಅಲ್ಲಿಗೂ ಇಲ್ಲಿಗೂ ಹಾರಿದೆ, ಓಡಿದೆ. ನೃತ್ಯಮಾಡಿದೆ, ತಾಳ ಹಾಕಿಕೊಂಡೆ. ನನ್ನ ಹರ್ಷಧ್ವಾನಗಳಿಂದ ಸುತುಮುತ್ತೂ ಮಾರ್ಮೊಳ ಗುಂಟಾಯಿತು.

ಆ ಮುದುಕ ನನಗೆ ಬಂದ ಶಕ್ತಿಯನ್ನು ಗಮನಿಸಿ ಆ ಬುರುಡೆಯನ್ನು ತನಗೂ ಕೊಡುವಂತೆ ಸಂಜ್ಞೆ ಮಾಡಿದ. ಕೊಡದಿದ್ದರೋ ಏನು ಮಾಡುತ್ತಾನೋ ಎಂಬ ಭಯದಿಂದಲೇ ಅವನಿಗೆ ಕೊಟ್ಟೆ. ಆತ ಮೊದಲು ಸ್ವಲ್ಪ ಕುಡಿದು ರುಚಿ ನೋಡಿದ. ಅನಂತರ ಎತ್ತಿ ಗಟಗಟನೆ ಒಳಗಿದ್ದ ಸಾರಾಯಿ ಪೂರಾ ಕುಡಿದು ಬುರುಡೆಯನ್ನು ಖಾಲೀಮಾಡಿ ಅದನ್ನು ದೂರ ಮರಗಳಾಚೆ ಎಸೆದುಬಿಟ್ಟ!

ತ್ವರೆಯಾಗಿ ಅವನ ತಲೆ ತಿರುಗತೊಡಗಿತು. ಆತ ನನ್ನ ಭುಜಗಳಮೇಲೆ ನೃತ್ಯಮಾಡಲು ಪ್ರಾರಂಭಿಸಿದ. ತರುವಾಯ ತುಸ ಆಯಾಸಪಟ್ಟವನಂತೆ ಕಂಡ. ಅವನ ದೇಹಶಕ್ತಿ ತುಸು ಕಡಮೆಯಾದಂತೆ ತೋರಿತು. ಭುಜದ ಮೇಲೆ ಸರಿಯಾಗಿ ಕುಳಿತಿರಲಾರದೆ ಈಚಾಚೆ ಓಲಾಡುತಿದ್ದ. ಸರಿಯಾಗಿ ಅಮಲೇರಿತ್ತು ಅವನಿಗೆ.

ನನ್ನಮೇಲೆ ಅವನ ಪಟ್ಟು ಸಡಿಲಾದ್ದು ಗಮನಿಸಿದೆ. ನನ್ನ ಕುತ್ತಿಗೆಯ ಸುತ್ತೂ ಬಳಸಿದ ಅವನ ಕಾಲುಗಳನ್ನು ಬಿಡಿಸಿ ಒಮ್ಮೆಗೇ ಅವನು ಅಷ್ಟುದೂರ ಬೀಳುವಂತೆ ದೂಡಿ ಹಾರಿಸಿಬಿಟ್ಟೆ. ಬಿದ್ದಲ್ಲೇ ಇದ್ದುಬಿಟ್ಟ ಆತ. ನಾನು ತಡಮಾಡದೆ ಮರದ ನಡುವೆಯಿದ್ದ ದೊಡ್ಡ ಕಲ್ಲನ್ನೆತ್ತಿ ಅವನ ತಲೆಯನ್ನು ಜಜ್ಜಿದೆ. ಸತ್ತ. ನಾನು ಅವನ ಸೆರೆಯಿಂದ ಬಿಡುಗಡೆ ಹೊಂದಿದೆ. ಅಲ್ಲಾ ಅವನನ್ನು ಕನಿಕರಿಸುವನೆಂದು ನಾನು ತಿಳಿಯುವುದಿಲ್ಲ.

(ಇನ್ನೂ ಇದೆ)






## 6

[ಒಂಬತ್ತು ವರ್ಷದವರೆಗೆ ಟ್ರಾಯ್ ನಗರದಲ್ಲಿ ಗ್ರೀಕರ ಮುತ್ತಿಗೆ ನಡೆದಾಗ, ಗ್ರೀಕರ ಅಗ್ರವೀರ ವಜ್ರಕಾಯ ಟ್ರಾಯ್ ರಾಜಕುಮಾರಿ ಪ್ರಮೋದಿನಿಯನ್ನು ನೋಡಿ ಮೋಹಿಸಿದ. ಗ್ರೀಕ್ ಪಕ್ಷವನ್ನು ಬಿಟ್ಟರೆ ಅವನಿಗೆ ಪ್ರಮೋದಿನಿ ದೊರೆಯುವಂತಿತ್ತು. ಆತನು ರಾರಾಜನೊಡನೆ ತಗಾದೆಮಾಡಿ ಯುದ್ಧರಂಗದಿಂದ ನಿಷ್ಕ್ರಮಿಸಿದ. ಒಡನೆಯೇ ಟ್ರೋಜನರ ಕೈ ಮೇಲಾಗಿ ಅವರು ಗ್ರೀಕರದೊಂದು ನೌಕೆಯನ್ನು ಸುಟ್ಟರು. ಆಗ—]

**ಚಂ**ದ್ರಪ್ರಭನ ನಾವೆ ಉರಿಯುವುದು ಕಾಣುತ್ತಲೇ ವಜ್ರಕಾಯನ ರಕ್ತ ಕುದಿಯಿತು. ಗ್ರೀಕು ಪಕ್ಷವಲ್ಲಿ ತಾನಾಗಲೀ ತನ್ನ ಸೈನಿಕರಾಗಲೀ ಇನ್ನು ಯುದ್ಧ ಮಾಡುವುದಿಲ್ಲವೆಂಬ ಪ್ರತಿಜ್ಞೆಯನ್ನು ಸ್ವಲ್ಪಮಟ್ಟಿಗೆ ಬಿಟ್ಟುಕೊಟ್ಟು ಗ್ರೀಕರಿಗೆ ಸಹಾಯವಾಗಿ ತನ್ನ ಸೈನ್ಯವನ್ನು ಕೂಡಲೇ ಕಳುಹಿಸಿಕೊಟ್ಟನು.

ಇಷ್ಟರಲ್ಲಿ ಪಿತೃಕೀರ್ತಿ ಎಂಬ ಗ್ರೀಕು ಯೋಧನು ವೀರಾವೇಶಗೊಂಡು ಟ್ರೋಜನರ ಸೈನ್ಯದಲ್ಲಿ ಅಲ್ಲಕಲ್ಲೋಲ ಮಾಡಿದ. ಉರಿಯುತ್ತಿರುವ ಗ್ರೀಕು ನೌಕೆಗೆ ಮುತ್ತಿಗೆ ಹಾಕಿದ್ದ ಟ್ರೋಜನ್ ಸೈನಿಕರ ಮಧ್ಯಕ್ಕೆ ಅವನು ಒಂದು ಶೂಲವನ್ನು ಬಲವಾಗಿ ಬೀಸಿದ. ಆ ಶೂಲವು ಒಬ್ಬ ವೀರನಿಗೆ ತಾಗಿ ಅವನು ಉರುಳಿದ. ಇದನ್ನು ಕಂಡು ಟ್ರೋಜನರು ಅದು ವಜ್ರಕಾಯನ ಕೆಲಸವೆಂದು ತಿಳಿದು ಅವನು ಮರಳಿ ಯುದ್ಧರಂಗಕ್ಕೆ ಬಂದನೆಂದು ಭಾವಿಸಿದರು. ವಜ್ರಕಾಯನೆಂದರೆ ಟ್ರೋಜನರಿಗೆ ಸಿಂಹಸ್ವಪ್ನ. ಆದರಿಂದ ಅವರು ಗಾಬರಿಬಿದ್ದು ಚೆಲ್ಲಾಚೆದರಾಗಿ ಓಡತೊಡಗಿದರು.

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ




ಇಂಥ ಕಠಿನ ಸಂದರ್ಭದಲ್ಲಿ ಟ್ರೋಜನರಿಗೆ ಧೈರ್ಯ ಹೇಳಿ ನಿಲ್ಲಿಸುವಂತಹ ನಾಯಕನಾರೂ ಇಲ್ಲದೆ ಹೋದರು. ದುರದೃಷ್ಟದಿಂದ ವೀರಸಿಂಹನು ಭೂಧವನಿಂದ ಗಾಯಗೊಂಡು ಅದಕ್ಕೆ ಮೊದಲೇ ಯುದ್ಧರಂಗವನ್ನು ಬಿಟ್ಟು ಟ್ರಾಯ್ ನಗರಕ್ಕೆ ಹಿಂತಿರುಗಿ ಹೋಗಿದ್ದ.

ಟ್ರೋಜನರನ್ನು ಈ ರೀತಿಯಾಗಿ ಗಾಬರಿಗೊಳಿಸಿದ ಪಿತೃಕೀರ್ತಿ ಚಂದ್ರಪ್ರಭನ ನೌಕೆಗೆ ಹಿಡಿದ ಬೆಂಕಿಯನ್ನು ಆರಿಸಿ ಓಡಿಹೋಗುತ್ತಿರುವ ಟ್ರೋಜನರನ್ನು ಅಟ್ಟಿಸಿಕೊಂಡು ಹೋದ. ಅವನು ವಜ್ರಕಾಯನ ಕವಚವನ್ನು ಧರಿಸಿದ್ದುದರಿಂದ ಟ್ರೋಜನರು ಅವನನ್ನು ನೋಡಿ ವಜ್ರಕಾಯನೆಂದೇ ಭ್ರಮೆಪಟ್ಟರು. ಆ ದಿನವೇ ಪ್ರಚಂಡ ಸಾಹಸದಿಂದ ಹೇಗಾದರೂ ಟ್ರಾಯ್



ನಗರವನ್ನು ವಶಪಡಿಸಕೊಳ್ಳಬೇಕೆಂದು ಪಿತೃಕೀರ್ತಿ ತೀರ್ಮಾನಿಸಿದ. ನಗರದ ಸುತ್ತಲೂ ಇರುವ ಕೋಟೆ ಗೋಡೆಗಳನ್ನು ಲಗ್ಗೆಯೇರಲು ಆತನು ಮೂರುಸಾರಿ ವಿಶ್ವಪ್ರಯತ್ನ ಮಾಡಿದ. ಆದರೆ ಟ್ರೋಜನರು ಅವನ ಈ ಪ್ರಯತ್ನವನ್ನು ಸಾಗಗೊಡಲಿಲ್ಲ.

ಕತ್ತಲೆ ಬೀಳುವ ವರೆಗೂ ಯುದ್ಧವು ಸಾಗುತ್ತಲೇ ಇತ್ತು. ಮಬ್ಬುಗತ್ತಲೆಯಲ್ಲಿ ಪಿತೃಕೀರ್ತಿಯ ಬೆನ್ನಿಗೆ ಯಾರೋ ತಿವಿದರು. ಆತನ ಶಿರಸ್ತ್ರಾಣವು ಬಿದ್ದುಹೋಯಿತು. ಕೈಯಲ್ಲಿದ್ದ ಶೂಲವು ಮುರಿದುಬಿತ್ತು. ತೀರ ಅಸಹಾಯ ಸ್ಥಿತಿಗೆ ಬಂದ.

ಇದನ್ನು ಗಮನಿಸಿದ ಮತ್ತೊಬ್ಬ ಟ್ರೋಜನ್ ವೀರ ಅವನಿಗೆ ಇನ್ನೊಂದೇಟು ತಿವಿದ. ಪಿತೃಕೀರ್ತಿ ಚೆನ್ನಾಗಿ ಏಟು ತಿಂದು ನಿರಾಯುಧನಾಗಿ ತೂಗಾಡುತ್ತಾ ಯುದ್ಧ ಭೂಮಿಯಿಂದ ಹೋಗುತ್ತಾ ಇರುವಾಗ ವೀರಸಿಂಹನು ತಿರುಗಿ ಬಂದು ಪಿತೃಕೀರ್ತಿಯನ್ನು ಒಂದೇ ಏಟಿಗೆ ಕೊಂದುಹಾಕಿದ. ತರುವಾಯ ಆತ ಪಿತೃಕೀರ್ತಿ ಧರಿಸಿದ ಕವಚವನ್ನು ಸುಲಿದು ತೆಗೆದುಕೊಂಡ.

ಸರಿಯಾಗಿ ಈ ಸಮಯಕ್ಕೆ ಪ್ರತಾಪನೂ, ಭೂಧವನೂ ಅಲ್ಲಿಗೆ ಬಂದರು. ಅವರೆಲ್ಲಾ ಕೂಡಿಕೊಂಡು ಪಿತೃಕೀರ್ತಿಯ ಶವವು ಟ್ರೋಜನರ ವಶ ಸಿಕ್ಕದಂತೆ ಚೆನ್ನಾಗಿ ಕತ್ತಲೆಬೀಳುವ ವರೆಗೂ ಕಾಪಾಡಿ ತರುವಾಯ ಅವನ ಕಳೇಬರವನ್ನು ತಮ್ಮ ನೌಕೆಗಳ ಬಳಿಗೆ ಸೇರಿಸಿದರು. ಪಿತೃಕೀರ್ತಿಯ ಮರಣವಾರ್ತೆಯನ್ನು ಕೇಳಿ







ವಜ್ರಕಾಯನು ಮಣ್ಣಿನಲ್ಲಿ ಹೊರಳಾಡಿ ಹೆಂಗುಸಿನಹಾಗೆ ಅತ್ತ. ಅವನ ತಾಯಿಯಾದ ತಟಿನಿ ಅವನಿಗಾಗಿ ಹೊಸ ಕವಚವನ್ನು ಆಕೂಡಲೇ ಸಿದ್ಧಮಾಡಿ ಅವನ ಶಿಬಿರಕ್ಕೆ ತಂದುಕೊಟ್ಟಳು. ವಜ್ರಕಾಯನು ಆ ಕವಚವನ್ನು ಧರಿಸಿ ರಾರಾಜನ ಬಳಿಗೆ ಹೋಗಿ ಅವನೊಡನೆ ರಾಜೀ ಮಾಡಿಕೊಂಡ. ತರುವಾಯ ಅವನು ಪಿತೃಕೀರ್ತಿಯ ಸಾವಿಗಾಗಿ ಹಗೆ ತೀರಿಸಿಕೊಳ್ಳಬೇಕೆಂದು ಯುದ್ಧರಂಗಕ್ಕೆ ಧಾವಿಸಿದ.

ಅಸಲೇ ಆಗ್ರಹಾವೇಶದಿಂದಿರುವ ವಜ್ರಕಾಯನು ಪ್ರಳಯರುದ್ರನಹಾಗೆ ಯುದ್ಧರಂಗಕ್ಕೆ ಬಂದಾಗ ಟ್ರೋಜನರು ಅವನ ವೇಗಕ್ಕೆ ನಿಲ್ಲಲಾರದೆ ಬೆದರಿ ಓಡತೊಡಗಿದರು. ವಜ್ರಕಾಯನು ಅವರನ್ನು ಸ್ಕಮುಂದರ್ ನದಿಯ ಕಡೆಗೆ ಓಡಿಸಿದನು.

ಅಲ್ಲಿ ಟ್ರೋಜನ್ ಸೈನಿಕರನ್ನು ಎರಡು ಭಾಗಗಳಾಗಿ ಸೀಳಿಸಿ ಚಿತ್ರವಧೆ ಮಾಡಿದನು. ಆ ಭಯಂಕರ ಯುದ್ಧದಲ್ಲಿ ಹೇಗೋ ಸಾವಿನಿಂದ ತಪ್ಪಿ ಟ್ರಾಯ್‌ನಗರಕ್ಕೆ ಸೇರಿದವರು ಅಂಜಿದ ಎರಳೆಗಳಂತೆ ಕಾಣಿಸಿದರು.

ಗ್ರೀಕ್ ವೀರರೊಳಗೆಲ್ಲಾ ಅಗ್ರಗಣ್ಯನಾದವನು ವಜ್ರಕಾಯ. ಟ್ರೋಜನರಲ್ಲಿ ಅಗ್ರಗಣ್ಯನು ವೀರಸಿಂಹ. ಇದುವರೆಗೂ ಇವರಿಬ್ಬರೂ ಯುದ್ಧದಲ್ಲಿ ಸಂಧಿಸಲಿಲ್ಲ.

ಇಂತಹ ಮಹಾವೀರರು ಈಗ ಸಂಧಿಸಿದರು. ಅವರೊಳಗೆ ನಡೆಯುವ ಯುದ್ಧವು ಹೇಗೆ ಪರಿಣಮಿಸುವುದೋ ನೋಡಲಿಕ್ಕೆ ಉಭಯಪಕ್ಷಗಳ




ಸೈನಿಕರೂ ಯುದ್ಧ ನಿಲ್ಲಿಸಿ ದೂರದಲ್ಲಿ ನಿಂತುಕೊಂಡರು. ಆರಂಭದಲ್ಲಿ ವೀರಸಿಂಹನು ವಜ್ರಕಾಯನನ್ನು ಇದಿರಿಸುವುದಕ್ಕೆ ಬದಲಾಗಿ ಓಡಿಹೋಗಲು ತೊಡಗಿದ. ವಜ್ರಕಾಯ ಆತನನ್ನು ಓಡಿಸಿಕೊಂಡು ಹೋದ.

ಹೀಗೆ ಓಡುವುದರಲ್ಲಿ ವೀರಸಿಂಹನ ಉದ್ದೇಶವೇನೆಂದರೆ, ವಜ್ರಕಾಯನು ಬಹಳಕಾಲ ಯುದ್ಧವನ್ನು ಬಿಟ್ಟವನಾದ್ದರಿಂದ ಯುದ್ಧದ ಅಭ್ಯಾಸ ಕಡಮೆಯಾಗಿರುವುದೆಂದೂ, ತನ್ನ ಹಿಂದೆ ಓಡಿಸಿದರೆ ವಜ್ರಕಾಯನು ಬೇಗದಲ್ಲೇ ದಣಿದು ತರುವಾಯ ತನ್ನಿಂದ ಸುಲಭವಾಗಿ ಸೋಲಿಸಲ್ಪಡುತ್ತಾನೆಂಬುದೇ ಆಗಿತ್ತು !

ಆದರೆ ವೀರಸಿಂಹನ ಯೋಚನೆ ತಪ್ಪಿತು. ಟ್ರಾಯ್ ಗೋಡೆಯ ಸುತ್ತಲೂ ಮೂರುಸಾರಿ

ಓಡಿಸಿದರೂ ವಜ್ರಕಾಯನಿಗೆ ಸ್ವಲ್ಪ ಕೂಡಾ ದಣಿವುಂಟಾಗಲಿಲ್ಲ.

ಕಡೆಗೆ ವೀರಸಿಂಹನು ಓಡುವುದನ್ನು ನಿಲ್ಲಿಸಿ ಎದುರುತಿರುಗಿದ. ವಜ್ರಕಾಯನು ಒಮ್ಮೆಗೇ ವೀರಸಿಂಹನ ಗುಂಡಿಗೆಯಲ್ಲಿ ತೂತುಬೀಳುವ ಹಾಗೆ ತಿವಿದ. ಆ ಒಂದೇ ಏಟಿಗೆ ವೀರಸಿಂಹನು ದಢಾಲ್ಲನೆ ಮುಗುಚಿಬಿದ್ದು ಪ್ರಾಣಬಿಡುತ್ತಾ, ತನ್ನ ಶರೀರವನ್ನು ತನ್ನವರ ಕಡೆಗೆ ಒಪ್ಪಿಸಬೇಕೆಂದು ಕೇಳಿಕೊಂಡು ಪ್ರಾಣಬಿಟ್ಟ.

ಆದರೆ ವಜ್ರಕಾಯನು ಪೀರಸಿಂಹನ ಕೊನೆಯ ಕೋರಿಕೆಯನ್ನು ಲಕ್ಷ್ಯಮಾಡಲಿಲ್ಲ. ಅಷ್ಟೊಂದು ಸಿಟ್ಟು ಅವನಮೇಲಿತ್ತು. ಆತನು ವೀರಸಿಂಹನ ಕವಚವನ್ನು ಸುಲಿದು ತೆಗೆದುಕೊಂಡು ವೀರಸಿಂಹನ ಕಾಲನ್ನು ಹಗ್ಗದಿಂದ ತನ್ನ ರಥಕ್ಕೆ ಕಟ್ಟಿಹಾಕಿದನು. ಬಳಿಕ ಆ ರಥವನ್ನು ತಮ್ಮ ನೌಕೆಗಳ ಕಡೆಗೆ ಹೊಡೆದುಕೊಂಡು ಹೋದ. ವೀರಸಿಂಹನ ಶವವು ಮಣ್ಣಿನಲ್ಲಿ ಹೊರಳುತ್ತಾ ರಥದೊಂದಿಗೆ ಹೋಯಿತು.

ಈ ವಿಧವಾಗಿ ಹಗೆ ತೀರಿದಮೇಲೆ ವಜ್ರಕಾಯನು ಪಿತೃಕೀರ್ತಿಗೆ ಅಂತ್ಯಕ್ರಿಯೆಗಳನ್ನು ಮಾಡಿ ಅವನ ಸಮಾಧಿಯಬಳಿಯಲ್ಲಿ ಕುದುರೆಗಳನ್ನೂ, ಪಿತೃಕೀರ್ತಿಯೊಂದಿಗಿದ್ದ ಒಂಬತ್ತು ಬೇಟೆನಾಯಿಗಳಲ್ಲಿ ಎರಡನ್ನೂ, ಹನ್ನೆರಡುಮಂದಿ ಟ್ರೋಜನ್ ಯುದ್ಧ ಖೈದಿಗಳನ್ನೂ ಬಲಿಕೊಟ್ಟನು. ಈಬಗೆಯಾಗಿ ಬಲಿಬಿದ್ದ ಟ್ರೋಜನರಲ್ಲಿ ವರ್ಧನನ ಕುಮಾರರು ಬಹಳಮಂದಿ ಇದ್ದರು. ವೀರಸಿಂಹನ ಶವವನ್ನು ಪಿತೃಕೀರ್ತಿಯ ಬೇಟೆನಾಯಿಗಳಿಗೆ ಹಾಕಬೇಕೆಂದುಕೂಡಾ ವಜ್ರ



ಕಾಯನು ಯೋಚನೆಮಾಡಿದ. ಆದರೆ ಮತ್ತೆ ಏನೋ ಯೋಚಿಸಿ ಆ ಪ್ರಯತ್ನ ಬಿಟ್ಟ.

ಪಿತೃಕೀರ್ತಿಯ ಅಂತ್ಯಕ್ರಿಯೆಯ ಸಂದರ್ಭ ದಲ್ಲಿ ಸ್ಪರ್ಧೆ ಪಂದ್ಯಗಳು ನಡೆದುವು. ರಥಗಳ ಸ್ಪರ್ಧೆಯಲ್ಲಿ ದೇವಮಯನು ಗೆದ್ದ. ಮಲ್ಲ ಯುದ್ಧದಲ್ಲಿ ರೂಪಧರನೂ, ಭೂಧವನೂ ಸಮ ಬಲರಾಗಿ ನಿರ್ಣಯಿಸಲ್ಪಟ್ಟರು.

ಇಷ್ಟೆಲ್ಲಾ ನಡೆದರೂ ವಜ್ರಕಾಯನ ಹಗೆ ಪೂರ್ತಿಯಾಗಿ ತೀರಿ ತಣಿದುಹೋದಂತಿಲ್ಲ. ಅವನು ದಿನಾ ಬೆಳಗು ಮುಂಜಾನೆಯೇ ಎದ್ದು ವೀರಸಿಂಹನ ಕಳೇಬರವನ್ನು ಪಿತೃಕೀರ್ತಿಯ ಸಮಾಧಿಯ ಸುತ್ತಲೂ ಮೂರುಸಾರಿ ಪ್ರದ ಕ್ಷಿಣೆಯಾಗಿ ಎಳೆಯುತ್ತಿದ್ದ. ಅದಕ್ಕಾಗಿಯೇ ಇಟ್ಟುಕೊಂಡಿದ್ದ ಆ ಕಳೇಬರವನ್ನು!

ಒಂದು ದಿನ ರಾತ್ರಿ ಕತ್ತಲೆ ಕವಿದಿರುವಾಗ ಟ್ರಾಯ್ ರಾಜನಾದ ವರ್ಧನನು ಗ್ರೀಕ್ ಶಿಬಿ ರಕ್ಕೆ ಬಂದು ತನ್ನ ಕುಮಾರನ ಕಳೇಬರವನ್ನು ಕೊಂಡುಕೊಳ್ಳಬೇಕೆಂಬ ಉದ್ದೇಶದಿಂದ ವಜ್ರ ಕಾಯನ ಗೂಡಾರವನ್ನು ಪ್ರವೇಶಮಾಡಿದ. ವರ್ಧನನು ಬಂದಾಗ ವಜ್ರಕಾಯನಿಗೆ ಗಾಢ ನಿದ್ರೆ. ಆ ಸಮಯದಲ್ಲಿ ಆತನನ್ನು ಸುಲಭವಾಗಿ ಹತ್ಯಮಾಡಲಿಕ್ಕೆ ವರ್ಧನನಿಗೆ ಒಳ್ಳೆಯ ಅವ ಕಾಶವಿತ್ತು. ಆದರೆ ವರ್ಧನ ಬಹಳ ಉದಾರತೆ ಯನ್ನು ತೋರಿಸಿದ.

ವಜ್ರಕಾಯನು ನಿದ್ರೆಯಿಂದೆದ್ದಮೇಲೆ ಅವ ನಿಗೂ ವರ್ಧನನಿಗೂ ಮಾತುಕಥೆ ನಡೆಯಿತು. ವರ್ಧನನು ವಜ್ರಕಾಯನಿಗೆ ವೀರಸಿಂಹನ ತೂಕ ದಷ್ಟು ಬಂಗಾರವನ್ನು ಕೊಟ್ಟು ಅವನ ಕಳೇ





ಬರವನ್ನು ತೆಗೆದುಕೊಂಡು ಹೋಗುವುದಾಗಿ ಅವರವರೊಳಗೆ ನಿರ್ಣಯವಾಯಿತು.

ಇದಕ್ಕೆ ಉಭಯಪಕ್ಷದವರೂ ಒಪ್ಪಿದಮೇಲೆ, ಗ್ರೀಕರು ಟ್ರಾಯ್ ಕೋಟೆಯ ಗೋಡೆಯಾಚೆಗೆ ಒಂದು ತಕ್ಕಡಿಯನ್ನು ನಿರ್ಮಿಸಿದರು. ಅದರ ಒಂದು ಬದಿಯಲ್ಲಿ ವೀರಸಿಂಹನ ಕಳೇಬರ ವನ್ನೂ, ಇನ್ನೊಂದು ಬದಿಯಲ್ಲಿ ಬಂಗಾರ ವನ್ನೂ ಇಡಬೇಕೆಂದರು.

ಟ್ರೋಜನರು ವರ್ಧನನ ಧನಾಗಾರದಿಂದ ಬಂಗಾರದ ಅಚ್ಚುಗಳನ್ನೂ, ನಗಗಳನ್ನೂ ಎಲ್ಲಾ ಬಳಿದು ತಂದು ತಕ್ಕಡಿ ತಟ್ಟೆಯಲ್ಲಿ ಸುರಿದರು. ಆದರೆ ವೀರಸಿಂಹನ ಶರೀರವೇ ಹೆಚ್ಚು ಭಾರ ತೋರಿಸುತಿತ್ತು. ಆಗ ವರ್ಧನನ ಕುಮಾರಿ ಪ್ರಮೋದಿನಿ ತನ್ನ ಕೈಯಲ್ಲಿದ್ದ ಬಂಗಾರದ



ಬಳೆಗಳನ್ನು ಕಳಚಿ ತಕ್ಕಡಿಯಲ್ಲಿ ಹಾಕಿದಳು. ವಜ್ರಕಾಯನು ಪ್ರಮೋದಿನಿಯನ್ನು ಅಪಾರವಾಗಿ ಪ್ರೇಮಿಸಿಕೊಂಡಿದ್ದ. ಅವನೀಗ ಅವಳು ಮಾಡಿದ ಕೆಲಸವನ್ನು ನೋಡಿ ವರ್ಧನನ ಕಡೆಗೆ ತಿರುಗಿ, "ನನಗೆ ನಿಮ್ಮ ಬಂಗಾರ ಯಾವುದೂ ಬೇಡ. ಪ್ರಮೋದಿನಿಯನ್ನು ನನಗೆ ಕೊಟ್ಟು ಮದುವೆ ಮಾಡಿ. ಭುವನಸುಂದರಿಯನ್ನು ಪ್ರತಾಪನಿಗೆ ಒಪ್ಪಿಸಿಬಿಡಿ. ನಾವು ಯುದ್ಧವನ್ನು ನಿಲ್ಲಿಸಿ ಸಂಧಿ ಮಾಡಿಕೊಳ್ಳುಹಾಗೆ ನಾನು ನೋಡಿಕೊಳ್ಳು ತ್ತೇನೆ" ಎಂದ.

"ಬೇಕಾದರೆ ಪ್ರಮೋದಿನಿಯನ್ನು ನೀನು ಮದುವೆಯಾಗು. ಆದರೆ ಭುವನಸುಂದರಿಯನ್ನು ನಿಮಗೆ ಒಪ್ಪಿಸಲಾರೆ. ಇಷ್ಟವಿದ್ದರೆ ಆ ಪ್ರಕಾರ ಸಂಧಿಗೆ ಏರ್ಪಾಡುಮಾಡು" ಎಂದ ವರ್ಧನ.

"ಪ್ರಯತ್ನಿಸಿ ನೋಡುತ್ತೇನೆ" ಎಂದ ವಜ್ರಕಾಯ.

ವರ್ಧನನು ವೀರಸಿಂಹನ ಕಳೇಬರವನ್ನು ತೆಗೆದುಕೊಂಡು ಹೋಗಿ, ಯಥಾವಿಧಿಯಾಗಿ ಅಂತ್ಯಕ್ರಿಯೆಯನ್ನು ನೆರವೇರಿಸಿದ. ಆ ಸಮಯ ದಲ್ಲಿ ಟ್ರೋಜನರ ರೋದನಧ್ವನಿ ಆಕಾಶಕ್ಕೆ ತಲಪಿತು. ವೀರಸಿಂಹನ ಸಾವು ಅವರೆಲ್ಲರನ್ನೂ ತುಂಬಾ ತಳಮಳಗೊಳಿಸಿತು.

ವಜ್ರಕಾಯನು ಪ್ರಮೋದಿನಿಯನ್ನು ಮದುವೆ ಯಾಗಿ ಯುದ್ಧಕಾರ್ಯವನ್ನು ನಿಲ್ಲಿಸಲು ಪ್ರಯತ್ನಪಟ್ಟದ್ದು, ತನ್ನ ಸಾವನ್ನು ತಾನೇ ಕೋರಿ ತಂದುಕೊಂಡ ಹಾಗಾಯಿತು. ಹೇಗಾ ದರೂ ಯುದ್ಧ ನಿಂತುಹೋಗುವುದೆಂಬ ಉದ್ದೇಶ





ದಿಂದ ಪ್ರಮೋದಿನಿ ಈ ಏರ್ಪಾಡಿಗೆ ಒಪ್ಪಿ ಕೊಂಡದ್ದೇ ಹೊರತು, ಅವಳು ವಜ್ರಕಾಯ ನನ್ನು ಪ್ರೇಮಿಸಲಿಲ್ಲ. ಏಕೆಂದರೆ ಅವನು ಅವಳ ಅಣ್ಣನಾದ ಇಲಿಯನನ್ನು ಬಹಳ ಕ್ರೂರತನ ದಿಂದ ಕೊಂದವನಾಗಿದ್ದ.

ಪ್ರಮೋದಿನಿ ವಜ್ರಕಾಯನಮೇಲೆ ಪ್ರೇಮ ವಿರುವಂತೆ ನಟಿಸುತ್ತಾ ಅವನ ಜೀವದ ರಹಸ್ಯ ವನ್ನು ತಿಳಿದುಕೊಂಡಳು. ಪ್ರೇಮಪರವಶನಾದ ವಜ್ರಕಾಯನು ತನ ಬಲಕಾಲಿನ ಹಿಮ್ಮಡದಲ್ಲಿ ಮರಣವು ಅಡಗಿರುವ ರಹಸ್ಯವನ್ನು ಹೇಳಿಬಿಟ್ಟ.

ಆತನ ಶರೀರವು ವಜ್ರಕಾಯ ವಾಗುವಂತೆ ಅವನ ತಾಯಿ ಅವನ ಬಾಲ್ಯದಲ್ಲಿ ಆ ಹಿಮ್ಮಡ ವನ್ನು ಹಿಡಿದುಕೊಂಡೇ ಅವನನ್ನು ನದಿಯಲ್ಲಿ ಮುಳುಗಿಸಿದ್ದಳು.

"ನೀನು ಸೂರ್ಯಾಲಯಕ್ಕೆ ನಿರಾಯುಧ ನಾಗಿ ಕಾಲಿನಲ್ಲಿ ಪಾದರಕ್ಷೆ ಇಲ್ಲದೆ ಬರಬೇಕು. ಅಲ್ಲಿ ಸೂರ್ಯ ಭಗವಾನನಿಗೆ ಬಲಿಗಳನ್ನು ಕೊಟ್ಟು ನಮ್ಮ ಮದುವೆ ಸ್ಥಿರಪಡಿಸೋಣ" ಎಂದು ಪ್ರಮೋದಿನಿ ವಜ್ರಕಾಯನಿಗೆ ಹೇಳಿದಳು.

ವಜ್ರಕಾಯನು ಆ ಪ್ರಕಾರವೇ ಆಲಯಕ್ಕೆ ಹೋದ. ಅಲ್ಲಿ ಪ್ರಮೋದಿನಿಯೊಂದಿಗೆ ಅವಳ ಬಂಧುಗಳೂ ಕೆಲವರಿದ್ದರು. ಅವಳ ಅಣ್ಣನಾದ ಅರಿಭಯಂಕರನು ವಜ್ರಕಾಯನಮೇಲೆ ಸ್ನೇಹ ವಿರುವಂತೆ ನಟಿಸುತ್ತಾ ಅವನನ್ನು ಬಿಗಿಯಾಗಿ ಆಲಿಂಗನೆ ಮಾಡಿದ. ಅದೇ ಸಮಯದಲ್ಲಿ ಮೋಹನನು ವಿಗ್ರಹದ ಹಿಂದೆ ನಿಂತು ವಜ್ರ ಕಾಯನ ಬಲಕಾಲಿನ ಹಿಮ್ಮಡಕ್ಕೆ ಒಂದು



ವಿಷಾಕ್ತ ಬಾಣವನ್ನು ಎಸೆದ. ಅದು ಸರಿಯಾಗಿ ನಾಟಿತು. ಆದರೂ ವಜ್ರಕಾಯನು ಕೂಡಲೇ ಸಾಯಲಿಲ್ಲ. ಆಲಯದಲ್ಲಿದ್ದ ಅಗ್ನಿಕುಂಡದಿಂದ ಉರಿಯುವ ಕೊಳ್ಳಿಗಳನ್ನು ಎರಡು ಕೈಗಳಲ್ಲಿಯೂ ಎತ್ತಿಕೊಂಡು ಅಲ್ಲಿದ್ದ ಟ್ರೋಜನರನ್ನು ಚೆನ್ನಾಗಿ ಸಾಯಬಡೆದ. ಆ ಏಟಿಗೆ ಅನೇಕಮಂದಿ ಟ್ರೋಜನರೂ ಆಲಯದಲ್ಲಿದ್ದ ಅನೇಕ ಕೆಲಸ ಗಾರರೂ ಬಲಿಯಾದರು.

ಇಷ್ಟರೊಳಗೆ ಗ್ರೀಕು ಶಿಬಿರದಿಂದ ರೂಪ ಧರ, ಭೂಧವ ಮೊದಲಾದ ಯೋಧರಿಗೆ ವಜ್ರ ಕಾಯನು ಏನೋ ತಂತ್ರ ಮಾಡುತ್ತಾನೆಂಬ ಅನುಮಾನವುಂಟಾಯಿತು. ಪ್ರಮೋದಿನಿಯನ್ನು ಮದುವೆಯಾಗಿ ಯುದ್ಧ ನಿಲ್ಲಿಸಲಿಕ್ಕೆ ಮಾತು ಕೊಟ್ಟ ವಿಷಯ ಅವರಾರಿಗೂ ತಿಳಿಯದು.





ವಜ್ರಕಾಯನು ಸೂರ್ಯಾಲಯಕ್ಕೆ ಒಬ್ಬಂಟಿಗನಾಗಿ ಹೋಗಿರುವನೆಂದು ತಿಳಿದು, ಗ್ರೀಕು ಯೋಧರು ಆ ತಂತ್ರ ಏನೆಂದು ತಿಳಿಯಲಿಕ್ಕಾಗಿ ಅಲ್ಲಿಗೆ ಬಂದರು.

ಅವರು ಆಲಯದ ದ್ವಾರದಿಂದ ಒಳಗೆ ಬರುವ ಸಮಯದಲ್ಲಿ ಮೋಹನನೂ, ಅರಿಭಯಂಕರನೂ ಆ ಬಾಗಿಲಿಂದಲೇ ಹೊರಗೆ ಹೋಗುತ್ತ ಅವರಿಗೆ ಎದುರಾದರು.

ರೂಪಧರ, ಭೂಧವ, ದೇವಮಯರು ಆಲಯದೊಳಗೆ ಬಂದು ಕೊನೆಯುಸಿರಿನಲ್ಲಿರುವ ವಜ್ರಕಾಯನನ್ನು ನೋಡಿದರು. "ಟ್ರಾಯ್ ನಗರವು ವಶವಾದಾಗ ನನ್ನ ಸಮಾಧಿಯ ಬಳಿಯಲ್ಲಿ ಪ್ರಮೋದಿನಿಯನ್ನು ಬಲಿಕೊಡಿ! ಇದೇ ನನ್ನ ಕೊನೆಯ ಕೋರಿಕೆ!" ಎನ್ನುತ್ತಾ ವಜ್ರಕಾಯನು ತನ್ನ ಅನುಚರರ ಕೈಯಲ್ಲಿ ಉರುಳಿಕೊಂಡು ಪ್ರಾಣಬಿಟ್ಟ!

ಮಹಾಬಲನಾದ ಭೂಧವನು ವಜ್ರಕಾಯನ ಶರೀರವನ್ನು ತನ್ನ ಭುಜದಮೇಲೆ ಹಾಕಿಕೊಂಡ. ಮೂವರು ಯೋಧರೂ ಆಲಯದ ಹೊರಗೆ ಬಂದರು. ಹೇಗಾದರೂ ಮಾಡಿ ವಜ್ರಕಾಯನ ಶವವನ್ನು ಕೈಕೊಳ್ಳಲು ಟ್ರೋಜನರು ವಿಶ್ವಪ್ರಯತ್ನ ಮಾಡಿದರು. ಆದರೆ ಗ್ರೀಕ್ ವೀರರು ಅವರನ್ನು ಓಡಿಸಿ ಶವವನ್ನು ತಮ್ಮ ನೌಕೆಯ ಬಳಿಗೊಯ್ದರು.

ವಜ್ರಕಾಯನ ತಾಯಿ ತಟಿನಿಯ ದುಃಖಕ್ಕೆ ಮೇರೆಯಿರಲಿಲ್ಲ. ಅವಳೊಂದಿಗೆ ಗ್ರೀಕ ಯೋಧರೆಲ್ಲರೂ ಹದಿನೇಳು ದಿವಸ ಶೋಕಮಾಡಿದರು. ಹದಿನೆಂಟನೇ ದಿನ ವಜ್ರಕಾಯನ ಶವವನ್ನು ಚಿತೆಯಲ್ಲಿ ಸುಟ್ಟರು. ಅವನ ಅಸ್ತಿಗಳನ್ನೂ, ಪಿತೃಕೀರ್ತಿಯ ಅಸ್ತಿಗಳನ್ನೂ ಸೇರಿಸಿ ಒಂದು ಬಂಗಾರದ ಕಲಶದಲ್ಲಿಟ್ಟು ಟ್ರಾಯ್‌ನಗರಕ್ಕೂ ಸಮುದ್ರಕ್ಕೂ ನಡುವಿನಲ್ಲಿರುವ ಒಂದು ಸ್ಥಳದಲ್ಲಿ ಸಮಾಧಿ ಮಾಡಿ, ಅಲ್ಲಿ ಒಂದು ಎತ್ತರವಾದ ಕಲ್ಲಿನ ದಿಣ್ಣೆಯನ್ನು ಕಟ್ಟಿಸಿದರು. ಈ ಸ್ಥಳಕ್ಕೆ ಸಮೀಪದಲ್ಲಿರುವ ಗ್ರಾಮಕ್ಕೆ ವಜ್ರಕಾಯನ ಹೆಸರಿಟ್ಟು, ಆ ಗ್ರಾಮದಲ್ಲಿ ಅವನ ಹೆಸರಿನ ಒಂದು ಆಲಯವನ್ನು ಕಟ್ಟಿ, ಅವನ ಶಿಲಾವಿಗ್ರಹವನ್ನು ಕೂಡಾ ಸ್ಥಾಪಿಸಿದರು. ಕಿವಿಗಳಲ್ಲಿ ಹೆಂಗುಸರ ಆಭರಣ ಧರಿಸಿರುವ ಈ ವಿಗ್ರಹವು ಈಗಲೂ ಅಲ್ಲಿದೆ. [ಇನ್ನೂ ಇದೆ]





# ಮೋಹಜ್ವರ

ಪೂರ್ವಕಾಲದಲ್ಲಿ ಯೋಧಪುರದಲ್ಲಿ ಪ್ರತಾಪನೆಂಬ ಯುವಕನಿದ್ದ. ಅವನು ದೊಡ್ಡ ಕುಟುಂಬದಲ್ಲಿ ಹುಟ್ಟಿದವನಲ್ಲ; ಆದರೂ ಆತ ಖಡ್ಗಯುದ್ಧದಲ್ಲಿ ಬಹಳ ಜಾಣ. ಅದಕ್ಕೆ ಜೋಡು ಅಪರಿಮಿತವಾದ ಧೈರ್ಯವೂ ಸಾಹಸವೂ ದೇಹಶಕ್ತಿಯೂ ಅವನಿಗಿತ್ತು.

ಅವನು ಅರಸನ ಆಸ್ಥಾನದಲ್ಲಿ ಕೆಲಸಕ್ಕೆ ಸೇರಿದ ಸ್ವಲ್ಪಕಾಲಕ್ಕೇ ತನ್ನ ಶೂರ ಪರಾಕ್ರಮಗಳಿಂದ ಅರಸನ ಮೆಚ್ಚಿಗೆ ಪಡೆದ. ಆದರೆ ಆತ ದೊಡ್ಡ ಮನೆತನದವನಲ್ಲದ್ದರಿಂದಲೂ ವಯಸ್ಸಿನಲ್ಲಿ ಚಿಕ್ಕವನಾದುದರಿಂದಲೂ ರಾಜನು ಅವನಿಗೆ ಆಸ್ಥಾನದಲ್ಲಿ ದೊಡ್ಡ ಪದವಿ ಕೊಡಲಿಲ್ಲ. ಅರಸನ ಮಮತೆಯನ್ನು ಮಾತ್ರ ತುಂಬಾ ಪಡೆದಿದ್ದ.

ಆ ನಗರದಲ್ಲಿ ಹಿರಣ್ಯಗುಪ್ತನೆಂಬ ಕೋಟೀಶ್ವರನೊಬ್ಬ ನಿದ್ದ. ಆತನಿಗೆ ಪಾರ್ವತಿ ಎಂಬ ಕುಮಾರಿ ಇದ್ದಳು. ಆಕೆ ಅತ್ಯಂತ ಸುಂದರಿ. ಪ್ರತಾಪನು ಒಂದು ದಿನ ಪಾರ್ವತಿಯನ್ನು ನೋಡಿ ಅವಳಮೇಲೆ ಪ್ರೇಮದಲ್ಲಿ ಸಿಕ್ಕಿಕೊಂಡ. ಬಹಳ ದಿನ ಅದನ್ನು ಯಾರಿಗೂ ಹೇಳದೆ ತನ್ನೊಳಗೇ ಅಡಗಿಸಿಕೊಂಡಿದ್ದ. ಈ ಪ್ರೇಮದಿಂದ ಆತ ದಿನದಿನಕ್ಕೆ ಹುಚ್ಚನಾಗುತ್ತಾ ಸಾಗಿದ. ಆತನು ಪಾರ್ವತಿಯೊಡನೆ ಮಾತಾಡಲಿಕ್ಕೆ ಒಂದೆರಡು ಬಾರಿ ಪ್ರಯತ್ನ ಮಾಡಿದನಾದರೂ ಸ್ವಲ್ಪವೂ ಉಪಯೋಗವಿಲ್ಲದೆ ಹೋಯಿತು.

ಅವನು ದಿನಕ್ಕೆದಿನ ಸೊರಗುವುದನ್ನು ಅರಸನೂ ನೋಡಿದ. ತನ್ನ ಮೆಚ್ಚಿನ ಶೂರನಾದ ಪ್ರತಾಪನ ಸ್ಥಿತಿಯನ್ನು ನೋಡಿ ಅರಸನಿಗೆ ವಿಚಾರವಾಯಿತು.

ಅರಸನು ತನ್ನ ಆಸ್ಥಾನ ವೈದ್ಯನನ್ನು ಕರೆದು, "ಪ್ರತಾಪನು ಏನೋ ವ್ಯಾಧಿಯಿಂದ ಕಷ್ಟಪಡುವಹಾಗಿದೆ. ಆತನ ಜೀವ ಅಮೂಲ್ಯವಾದುದು. ನೀವು ಚೆನ್ನಾಗಿ ಪರೀಕ್ಷೆಮಾಡಿ ಹೇಗಾದರೂ ಅವನಿಗೆ ಚಿಕಿತ್ಸೆ ಮಾಡಿ ಸರಿಮಾಡಿರಿ" ಎಂದು ಆಜ್ಞಾಪಿಸಿದನು.

ರಾಜವೈದ್ಯನು ಪ್ರತಾಪನನ್ನು ಪರೀಕ್ಷೆ ಮಾಡಿದ. ಅವನಿಗೆ ರೋಗದ ಗುಟ್ಟೇ ಸಿಕ್ಕಲಿಲ್ಲ. ಸ್ವಲ್ಪ ದಿನಗಳವರೆಗೆ ಏನೇನೋ ಔಷದಗಳನ್ನು

ಎನ್. ವಿಮಲಾ



ಕೂಡಾ ಕೊಟ್ಟು ನೋಡಿದ. ಅದರಿಂದ ಯಾವುದೊಂದು ಫಲವೂ ಸಿಕ್ಕಲಿಲ್ಲ.

ಪ್ರತಾಪನಿಗೆ ಅನಾರೋಗ್ಯವಾಗಿರುವುದೆಂದು ತಿಳಿದು ಆತನ ಬಾಲ್ಯಮಿತ್ರ ಸತ್ಯವರ್ಮನೆಂಬವ ಅವನನ್ನು ನೋಡಲು ಬಂದ. ಪ್ರತಾಪನು ಸತ್ಯವರ್ಮನೊಡನೆ ತನ್ನ ರಹಸ್ಯವನ್ನು ಮುಚ್ಚಿಡದೆ ನಿಜವನ್ನು ಹೇಳಿ, "ಮನೋವ್ಯಾಧಿಗೆ ಮದ್ದಿಲ್ಲ. ಪಾರ್ವತಿಯನ್ನು ಮದುವೆ ಮಾಡಿಕೊಂಡರಲ್ಲದೆ ನನ್ನ ಈ ರೋಗ ಕುದುರದು. ಅದೇನೂ ಈ ಜನ್ಮದಲ್ಲಿ ಸಾಧ್ಯವಾಗುವಂತಿಲ್ಲ. ಅವಳೆಲ್ಲಿ? ನಾನೆಲ್ಲಿ? ನಾನು ಏನಾದರೂ ವಿಷ ತಿಂದು ಸಾಯುವುದೇ ಮೇಲು. ನನಗಾಗಿ ನೀನೇಕೆ ವ್ಯಸನಪಡುತ್ತಿ" ಎಂದ. "ಹುಚ್ಚನೆ! ಇಷ್ಟೊಂದಕ್ಕೆ ಅಧೈರ್ಯ ಪಡಬೇಕೊ? ಹೋಗಿ ಪಾರ್ವತಿಯೊಡನೆ ಮಾತಾಡಿ ನಿನ್ನ ಪ್ರೇಮವನ್ನು ತಿಳಿಸು. ಅವಳೊಡನೆ ಮಾತಾಡದೆಯೇ ಏನೂ ನಿರ್ಧಾರ ಮಾಡಿಬಿಡಬಾರದು. ಅವಳು ನಿನ್ನನ್ನು ಮದುವೆಯಾಗಲು ಒಪ್ಪಬಹುದು. ಒಂದುವೇಳೆ ಒಪ್ಪದಿದ್ದರೂ ನಿನ್ನ ವ್ಯಥೆ ತೀರೀತು" ಎಂದು ಹೇಳಿದ ಸತ್ಯವರ್ಮ.

"ಅದು ನಡೆಯದ ಮಾತು. ಪಾರ್ವತಿ ಕೋಟೀಶ್ವರನ ಮಗಳು. ನಾನೊಬ್ಬ ನಾಮ ಗೋತ್ರವಿಲ್ಲದ ಸಾಮಾನ್ಯ ಸೈನಿಕ. ನಾನು ಅವಳನ್ನು ಹೇಗೆ ನೋಡಲಿ? ಹೇಗೆ ಮಾತಾಡಲಿ? ನನ್ನನ್ನು ಹೀಗೇ ಸಾಯಲು ಬಿಡು" ಎಂದ ಪ್ರತಾಪ ವ್ಯಸನದಿಂದ.

"ನಿನ್ನಿಂದಾಗದ ಕೆಲಸ ನಾನು ಮಾಡುತ್ತೇನೆ. ಧೈರ್ಯವಾಗಿರು" ಎಂದು ಸತ್ಯವರ್ಮ ತನ್ನ ಮಿತ್ರನಿಗೆ ಧೈರ್ಯ ಹೇಳಿದ. ಇದನ್ನು ಕೇಳಿ ಪ್ರತಾಪನಿಗೆ ಆಶೆಯುಂಟಾಯಿತು. ಧೈರ್ಯ ಬಂತು.

ಅಂದಿನಿಂದ ಪ್ರತಾಪನ ರೋಗ ಗುಣಮುಖವಾಗುತ್ತಾ ಬಂತು. ಮೂರು ನಾಲ್ಕು ದಿವಸಗಳಲ್ಲಿ ಆತ ಎಂದಿನಂತೆ ನಡೆದಾಡ ತೊಡಗಿದ. ಈ ಒಳ್ಳೆಯ ಲಕ್ಷಣ ನೋಡಿ ಅರಸನಿಗೂ ಬಹಳ ಸಂತೋಷವಾಯಿತು.

ಇಷ್ಟರಲ್ಲಿ ಸತ್ಯವರ್ಮ ಒಬ್ಬ ವ್ಯಾಪಾರಿಯ ಸೋಗು ಹಾಕಿಕೊಂಡು ಒಂದು ಮೂಟೆಯಲ್ಲಿ ಬಗೆಬಗೆಯ ಸುಂದರವಾದ ಸ್ತ್ರೀಯರ ಸಾಮಗ್ರಿಗಳನ್ನು ಇಟ್ಟುಕೊಂಡು, ನೇರಾಗಿ ಹಿರಣ್ಯಗುಪ್ತನ ಮನೆಗೆ ಹೋಗಿ ಪಾರ್ವತಿಯನ್ನು ನೋಡಿದ.



ಪಾರ್ವತಿ ಅವನು ತಂದ ವಿಶೇಷ ವಸ್ತುಗಳನ್ನು ನೋಡಿ ಬಹಳ ಸಂತಸಪಟ್ಟಳು.

ಅವೆಲ್ಲಾ ಸುಲಭದಲ್ಲಿ ಎಲ್ಲಿಯೂ ಸಿಕ್ಕದ ಬಹಳ ಅಪೂರ್ವ ವಸ್ತುಗಳಾಗಿದ್ದುವು. ಅವಳು ಅವುಗಳಲ್ಲಿ ಕೆಲವನ್ನು ಆರಿಸಿಕೊಂಡು, "ಇವುಗಳ ಬೆಲೆ ಏನು?" ಎಂದು ಕೇಳಿದಳು.

"ಇವುಗಳಲ್ಲಿ ನಿಮಗೆ ಬೇಕಾದ್ದು ಇವೇನಾ ಅಮ್ಮಾ?" ಎಂದು ಕೇಳಿದ ಸತ್ಯವರ್ಮ.

"ಬೇಕಾದ್ದಕ್ಕೇನು? ನಿನ್ನ ಹತ್ತಿರ ಇರುವ ಎಲ್ಲಾ ವಸ್ತುಗಳೂ ಬೇಕಾದ್ದೇ. ಆದರೆ ಒಂದೇ ಬಾರಿ ಹೇಗೆ ಕೊಂಡುಕೊಳ್ಳಲಿ?" ಎಂದಳು ಪಾರ್ವತಿ ಆಶೆಯಿಂದ.

"ನಾನೀಗ ನಿಮ್ಮಲ್ಲಿ ಹಣ ಕೇಳಿದೆನೇ ಅಮ್ಮಾ? ಇವನ್ನು ನಿಮಗೆ ಬಹುಮಾನವಾಗಿ ಕಳುಹಿಸಿದವನು ವ್ಯಾಪಾರ ಮಾಡುವವನಲ್ಲ. ನೀವೆಂದರೆ ಆತ ಪ್ರಾಣವೇ ಬಿಡುತ್ತಾನೆ. ನಿಮ್ಮನ್ನು ಒಮ್ಮೆ ನೋಡಿ ಮಾತಾಡಲು ಪ್ರಯತ್ನಮಾಡಿ ಸಾಧ್ಯವಾಗದೆ ಮನೋವ್ಯಾಧಿಯಿಂದ ಹಾಸಿಗೆ ಹಿಡಿದಿದ್ದಾನೆ. ಬಹಳ ಒಳ್ಳೆಯ ಮನುಷ್ಯ. ಅವನ ಸ್ಥಿತಿ ನೋಡಿದರೆ ನೀವು ನಿಜವಾಗಿ ಕರಗಿ ನೀರಾಗಬೇಕು" ಎಂದು ಬೇರೆಯವರು ಕೇಳದಂತೆ ಸತ್ಯವರ್ಮ ಪಾರ್ವತಿಗೆ ಮನಸ್ಸು ಕರಗುವಹಾಗೆ ಹೇಳಿದ.

ಪಾರ್ವತಿ ಸ್ವಲ್ಪ ಯೋಚಿಸಿ, "ಯಾವನೋ ಹುಚ್ಚನಾಗಿದಾನೆ ಪಾಪ. ನನ್ನೊಡನೆ ಮಾತಾಡುವುದೇ ಅವನಿಗೆ ಬೇಕಾಗಿದ್ದರೆ ನಾಳೆ ಮಧ್ಯಾಹ್ನ ಇಲ್ಲಿಗೆ ಬರಲಿಕ್ಕೆ ಹೇಳು. ಅದಕ್ಕೇನು ಮಹಾ! ಮಾತಾಡಿದರಾಯಿತು. ಈ ಭಾಗ್ಯಕ್ಕೆ ಹಾಸಿಗೆ ಹಿಡಿಯಬೇಕೇಕೋ!" ಎಂದಳು.

ಸತ್ಯವರ್ಮ ಈ ಸಂಗತಿಯನ್ನು ಪ್ರತಾಪನಿಗೆ ಹೇಳಿದ. ಪ್ರತಾಪನು ಅತ್ಯಂತ ಸಂತೋಷದಿಂದ ಮರುದಿನ ಮಧ್ಯಾಹ್ನ ಪಾರ್ವತಿಯ ಮನೆಗೆ ಹೋದ.

ಪಾರ್ವತಿ ಅವನನ್ನು ತನ್ನ ಕೋಣೆಗೆ ಕರೆಸಿದಳು. ಪ್ರತಾಪನು ಅವಳಿಗೆ ತನ್ನ ಪ್ರೇಮವನ್ನೆಲ್ಲಾ ಹೇಳಿದ. ಇದನ್ನು ಕೇಳಿ ಅವಳಿಗೆ ಯೋಚನೆಗಿಟ್ಟಿತು. ಪ್ರತಾಪನು ಒಳ್ಳೆಯವನೇ ಆದರೂ ತನ್ನನ್ನು ಪ್ರೇಮಿಸುವ ನೆಂಬುದು ಕೇವಲ ಭ್ರಮೆ, ಆ ಭ್ರಮೆಯನ್ನು ಹೋಗಲಾಡಿಸಬೇಕೆಂದು ಭಾವಿಸಿಕೊಂಡಳು ಪಾರ್ವತಿ. "ಅಯ್ಯಾ, ನನ್ನ ಮೇಲೆ ನಿನಗೆ ತುಂಬಾ

ಪ್ರೇಮ ವಿರುವುದೆನುತ್ತಿ. ಇದು ನಿಜವಾದರೆ ಈ ಕ್ಷಣದಿಂದ ಒಂದು ವರ್ಷದವರೆಗೆ ನೀನು ಯಾರೊಡನೆಯೂ ಎಷ್ಟುಮಾತ್ರವೂ ಮಾತಾಡ ಬಾರದು. ಈ ಕೆಲಸ ನೀನು ಮಾಡಿದರೆ ನಿನಗೆ ನನ್ನಮೇಲೆ ನಿಜವಾಗಿಯೂ ಪ್ರೇಮವುಂಟೆಂದು ನನಗೆ ನಂಬುಗೆಯಾಗುತ್ತದೆ. ಆಗ ನಿನ್ನನ್ನು ಮದುವೆಯಾಗುತ್ತೇನೆ" ಎಂದು ಹೊಸತೊಂದು ನಿಬಂಧನೆ ಹೇಳಿದಳು ಪಾರ್ವತಿ.

ಒಂದು ವರ್ಷದವರೆಗೆ ಮೂಕನಾಗಿರಲು ಪ್ರತಾಪನು ಒಪ್ಪಲಿಕ್ಕಿಲ್ಲವೆಂದೂ ತಾನು ಅವನನ್ನು ಮದುವೆಯಾಗುವ ಅಗತ್ಯ ಬಾರದೆಂದೂ ಪಾರ್ವತಿಯ ಉದ್ದೇಶ.

ಪಾರ್ವತಿ ಕಠಿನ ಹೃದಯಳೆಂದೂ ಅವಳಿಗೆ ತನ್ನಮೇಲೆ ಒಂದಿಷ್ಟೂ ಪ್ರೇಮ ವಿಲ್ಲವೆಂದೂ ಪ್ರತಾಪನು ಗ್ರಹಿಸಿದ. ಅವನಿಗೆ ಅವಳ ಮೇಲೆ ಬಹಳ ಕೋಪ ಬಂತು. ಕೂಡಲೇ ಅವನು ಹೃದಯವನ್ನು ದೃಢಮಾಡಿಕೊಂಡನು. ಒಂದು ವರ್ಷದವರೆಗೆ ಮೂಕವ್ರತ ಹಿಡಿದು ಇವಳನ್ನು ದೊಡ್ಡ ಪೇಚಿನಲ್ಲಿ ಸಿಕ್ಕಿಸಬೇಕೆಂದು ನಿಶ್ಚಯಿಸಿಕೊಂಡನು. ಮೂಕವ್ರತದ ಷರತುಗಳಿಗೆ ತಾನು ಒಪ್ಪಿಕೊಂಡಿರುವೆನೆಂದು ಸಂಜ್ಞೆಗಳಿಂದ ಪಾರ್ವತಿಗೆ ತಿಳಿಸಿ ಪ್ರತಾಪನು ಹೊರಟುಹೋದ.

ಅಂದಿನಿಂದ ಅವನು ಯಾರೊಡನೆಯೂ ಮಾತಾಡುವುದನ್ನು ಬಿಟ್ಟುಬಿಟ್ಟ. ಅವನಿಗೆ ಅಕಸ್ಮಾತ್ತಾಗಿ ಬಾಯಿ ಬಿದ್ದುಹೋಯಿತೆಂಬ ವಾರ್ತೆ ಊರೆಲ್ಲಾ ವ್ಯಾಪಿಸಿತು. ಈ ಸಂಗತಿಯನ್ನು ತಿಳಿದು ಅರಸನಿಗೆ ಬಹಳ ವ್ಯಸನವಾಯಿತು. ಪ್ರತಾಪನು ಕಠಿನವಾದ ಕಾಯಿಲೆ





ಯಿಂದ ಗುಣಮುಖನಾದನೆಂದು ಸಂತಸಪಟ್ಟಾಗಲೇ ಆ ವ್ಯಾಧಿ ಈ ರೂಪದಲ್ಲಿ ಹೊರಬಿದ್ದಿತೆಂದು ಅರಸನು ಚಿಂತಿಸಿದ. ದೇಶದಲ್ಲಿರುವ ಎಲ್ಲ ವೈದ್ಯರಿಗೂ ಹೇಳಿ ಕಳಿಸಿದ. ಹೇಗಾದರೂ ಮಾಡಿ ಪ್ರತಾಪನ ರೋಗವನ್ನು ಗುಣಪಡಿಸಬೇಕೆಂದು ಅಪ್ಪಣೆಕೊಟ್ಟ.

ಎಷ್ಟೋ ವೈದ್ಯರು ಬಂದು ಪ್ರಯತ್ನಿಸಿದರೂ ಏನೂ ಪ್ರಯೋಜನವಾಗಲಿಲ್ಲ. ದಿನದಿನಕ್ಕೂ ಅರಸನ ಆಂದೋಳನವು ಹೆಚ್ಚಿತು.

ಪ್ರತಾಪನು ಯುವಕ. ಶೂರಯೋಧ. ಎಂದಿಗಾದರೂ ಸರ್ವಸೇನಾಧಿಪತಿಯಾಗತಕ್ಕವ. ತುಂಬಾ ಕೀರ್ತಿ ಪ್ರತಿಷ್ಠೆಗಳನ್ನು ಸಂಪಾದಿಸಬಲ್ಲವ. ಅಂಥವನಿಗೆ ಬಾಯಿಬಿದ್ದು ಹೋಗುವುದೆಂದರೇನು? ಎಂಥ ವೈದ್ಯನ ಚಿಕಿತ್ಸೆಗೂ ಗುಣವಾಗುವುದಿಲ್ಲವೆಂದರೇನು? ಪ್ರತಾಪನಿಗೆ ಮಾತು ಬರಿಸುವವರಿಗೆ ತಾನು ಒಂದು ಲಕ್ಷ ರೂಪಾಯಿ ಬಹುಮಾನ ಕೊಡುವುದಾಗಿ ರಾಜ ದೇಶದೊಳಗೆಲ್ಲಾ ಡಂಗುರ ಸಾರಿಸಿದ.

ಡಂಗುರನ್ನು ಕೇಳಿ ಎಲ್ಲೆಲ್ಲಿಂದಲೋ ಘನವೈದ್ಯರೆಲ್ಲಾ ಬಂದು ಪ್ರತಾಪನನ್ನು ಪರೀಕ್ಷಿಸಿ, ಅವನ ಮೂಕತನವನ್ನು ಹೋಗಲಾಡಿಸಲು ಏನೂ ಮಾಡಲಾರದೇ ಹೋದರು.

ರೂಪಾಯಿಯ ಆಶೆಯಿಂದ ವೈದ್ಯರಲ್ಲದವರೂ ಬಂದು ತಮ್ಮ ಹುಚ್ಚು ಚಿಕಿತ್ಸೆಗಳಿಂದ ಪ್ರತಾಪನನ್ನು ಬಾಧಿಸ ತೊಡಗಿದರು. ಈ ಸಂಗತಿ ತಿಳಿದಮೇಲೆ ಅರಸನು, ಪ್ರತಾಪನಿಗೆ ಚಿಕಿತ್ಸೆ ಮಾಡಿ ಸೋತವರಿಗೆ ಜುಲ್ಮಾನೆ ವಿಧಿಸುವೆನೆಂದೂ, ಜುಲ್ಮಾನೆ ಕಟ್ಟಲು ಸಾಧ್ಯವಾಗದವರು ಸೆರೆ





ಮನೆಯಲ್ಲಿರಬೇಕೆಂದೂ ಮತ್ತೊಂದು ಪ್ರಕಟನೆ ಮಾಡಿದ. ಇದರಿಂದ ಅನೇಕರು ಸೋತು ಸೆರೆ ಮನೆಯನ್ನು ಸೇರಿದರು.

ಆರು ತಿಂಗಳು ಕಳೆಯಿತು. ಅನೇಕಮಂದಿ ವೈದ್ಯರು ಅವನ ಮೂಕತನವನ್ನು ತೆಗೆಸಲಾರದೆ, ಅರಸನು ವಿಧಿಸಿದ ಜುಲ್ಮಾನೆಯನ್ನು ಕೊಡ ಲಾರದೆ ಸೆರೆಮನೆಗೆ ಸೇರಿದರು. ಈ ಸಮಾಚಾರ ಗಳೆಲ್ಲಾ ಆಗಿಂದಾಗಲೇ ಪಾರ್ವತಿಗೆ ತಿಳಿ ಯುತ್ತಲೇ ಇದ್ದುವು. ಅವಳಿಗೆ ಮೊದಲು ಆಶ್ಚರ್ಯವಾಯಿತು. ಏಕೆಂದರೆ ಪ್ರತಾಪನು ಈ ಮೂಕವ್ರತವನ್ನು ಕಡೆತನಕ ಕಾಪಾಡಿಕೊಳ್ಳ ಲಾರನೆಂದೇ ಭಾವಿಸಿದ್ದಳು. ಈಗ ಪ್ರತಾಪನ ಮೇಲೆ ಅವಳಿಗೆ ಕನಿಕರವಾಯಿತು. ಅವನು ಏಕೆ ಮಾತಾಡುವುದಿಲ್ಲವೆಂದು ಅವಳಿಗೊಬ್ಬಳಿಗೇ ಗೊತ್ತು. ಇದರಿಂದಾಗಿ ವೈದ್ಯರಿಗೂ ಬಾಧೆ; ಪ್ರತಾಪನಿಗೂ ಬಾಧೆ. ಎಷ್ಟೋ ಒಳ್ಳೆಯ ವೈದ್ಯ ರೆಲ್ಲಾ ಸೆರೆಯಲ್ಲಿ ಬಿದ್ದಿದ್ದಾರೆ. ಏನೋ ಸಣ್ಣ ದೊಂದು ಹುಣ್ಣು ಪರ್ವತಷ್ಟು ದೊಡ್ಡದಾದ ಹಾಗಾಯಿತು.

ಪ್ರತಾಪನ ವಿಷಯವಾಗಿ ಅರಸನು ತೋರಿ ಸುವ ಶ್ರದ್ಧೆಯನ್ನು ಕಂಡು ಅವಳಿಗೆ ಆಶ್ಚರ್ಯ ವಾಯಿತು. ಅವನೊಬ್ಬ ಸಾಮಾನ್ಯ ಸೈನಿಕ ನೆಂದೇ ತಿಳಿದಿದ್ದಳು. ಅರಸನ ಮೆಚ್ಚುಗೆಗೆ ಇಷ್ಟೊಂದು ಪಾತ್ರನಾಗಿದ್ದಾನೆಂದು ಅವಳಿಗೆ ಗೊತ್ತೇ ಇರಲಿಲ್ಲ. ಈ ವಿಷಮ ಪರಿಸ್ಥಿತಿಯೆಲ್ಲಾ ತನ್ನ ಮೂಲಕವೇ ಬಂತೆಂದು ಚಿಂತಿಸಿದಳು. ತಾನೇ ಅದನ್ನು ಪರಿಹರಿಸಬೇಕೆಂದೂ ನಿಶ್ಚ ಯಿಸಿಕೊಂಡಳು.

ಪಾರ್ವತಿ ಅರಸನ ದರ್ಶನಮಾಡಿ, "ಮಹಾ ರಾಜ, ನನಗೆ ಅನುಮತಿ ಕೊಡಬೇಕು. ಪ್ರತಾ ಪನಿಗೆ ನಾನು ಚಿಕಿತ್ಸೆಮಾಡಿ ಮಾತು ಬರಿಸು ತ್ತೇನೆ" ಎಂದಳು.

ರಾಜ ಆಶ್ಚರ್ಯದಿಂದ ಅವಳನ್ನು ನೋಡಿ, "ನೀನೆ? ದೊಡ್ಡ ದೊಡ್ಡ ವೈದ್ಯರಿಂದಾಗದ ಕೆಲಸ ನಿನ್ನಿಂದಾದೀತೆ? ನಿನಗೆ ವೈದ್ಯವೇನು ಗೊತ್ತು?" ಎಂದು ಕೇಳಿದ.

"ನನಗೆ ವೈದ್ಯಮಾಡಲು ಗೊತ್ತಿಲ್ಲವೆಂಬುದು ನಿಜವೇ. ಆದರೆ ಅವನಿಗೆ ಮಾತು ಬಾರದ ಕಾರಣ ನನಗೆ ಗೊತ್ತು. ಆದ್ದರಿಂದ ನಾನು ಅವನಿಗೆ ಮಾತು ಬರಿಸಬಲ್ಲೆ. ಚಿಕಿತ್ಸೆಮಾಡಲು ನನಗೆ ಅನುಜ್ಞೆ ಕೊಡಿಸಿ" ಎಂದಳು ಪಾರ್ವತಿ.



"ಚಿಕಿತ್ಸೆಮಾಡಿ ಗುಣಪಡಿಸಲು ತಪ್ಪಿದರೆ ಜುಲ್ಮಾನೆ ಕಟ್ಟಬೇಕಾಗುವುದು—ಗೊತ್ತಷ್ಟೆ?" ಕೇಳಿದ ರಾಜ.

"ಗೊತ್ತಿದೆ ಪ್ರಭು. ಆ ನಿಯಮಕ್ಕೆ ಒಪ್ಪಿಕೊಂಡೇ ನಾನು ಚಿಕಿತ್ಸೆಮಾಡಲು ಬಂದಿದ್ದೇನೆ" ಎಂದಳು ಪಾರ್ವತಿ.

ಅರಸನ ಅಪ್ಪಣೆ ಪಡೆದು ಅವಳು ಪ್ರತಾಪನ ಬಳಿಗೆ ಹೋದಳು.

"ಪ್ರತಾಪ! ನಾನು ನಿನಗೆ ತುಂಬಾ ಅಪಚಾರ ಮಾಡಿದೆ! ಆರು ತಿಂಗಳಿಂದ ಮೂಕನಾಗಿರುತ್ತೀ. ಇನ್ನು ಸಾಕು. ಮಾಮೂಲಾಗಿ ಮಾತಾಡು. ನಾನು ನಿನ್ನನ್ನು ವಿವಾಹವಾಗಲಿಕ್ಕೆ ಸಿದ್ಧಳಾಗಿದ್ದೇನೆ" ಎಂದಳು ಅವಳು ಪ್ರತಾಪನಿಗೆ.

ಪ್ರತಾಪ ಅವಳಮೇಲೆ ಸಿಟ್ಟಾಗಿಯೇ ಇದ್ದ. "ಈ ದುಷ್ಟೆ ಒಂದು ವರ್ಷದೊಳಗೆ ನನ್ನಿಂದ ಮಾತಾಡಿಸಿ ನಿಯಮಭಂಗಮಾಡಿಸಿ ಅರಸನು ಕೊಡುವ ಲಕ್ಷ ರೂಪಾಯಿಯನ್ನು ಹೊಡೆದುಕೊಳ್ಳಲಿಕ್ಕೆ ಈ ಉಪಾಯ ಮಾಡಿದ್ದಾಳೆ. ಇವಳಿಗೆ ತಕ್ಕ ಶಾಸ್ತಿ ಮಾಡುತ್ತೇನೆ" ಎಂದುಕೊಂಡು ಆತ ಯಾವ ಉತ್ತರವೂ ಹೇಳದೆ ಮೌನವನ್ನೆ ಸಾಧಿಸಿದ. "ಮಾತಾಡಲಾರೆ" ಎಂದು ಸಂಜ್ಞೆಯಿಂದಲೇ ಅವಳಿಗೆ ತಿಳಿಸಿದ.

ಪಾರ್ವತಿ ಅವನನ್ನು ಬೇಡಿಕೊಂಡಳು ಕಣ್ಣೀರು ಸುರಿಸಿ ಅಂಗಲಾಚಿದಳು. ಆದರೆ ಪ್ರತಾಪನು ಖಂಡಿತವಾಗಿ ಮಾತಾಡಲು ನಿರಾಕರಿಸಿಬಿಟ್ಟ. ಪಾರ್ವತಿ ನಿರುತ್ಸಾಹದಿಂದ ತಲೆವಾಗಿ ಅರಸನಬಳಿಗೆ ತಿರುಗಿಬಂದು, "ಮಹಾರಾಜ, ನನ್ನ ಚಿಕಿತ್ಸೆ ವ್ಯರ್ಥವಾಯಿತು. ನನಗೆ ತಕ್ಕ ಶಿಕ್ಷೆ ವಿಧಿಸಬೇಕು" ಎಂದಳು.

ಅರಸನು ಕೂಡಲೇ ಪಾರ್ವತಿಯನ್ನು ಖೈದಿನಲ್ಲಿಡಿಸಿ ಅವಳ ತಂದೆಗೆ ವಾರ್ತೆ ಕಳುಹಿಸಿದ. ಆತ ಬಂದು ಜುಲ್ಮಾನೆಯನ್ನು ಸಲ್ಲಿಸಿ ಅವಳನ್ನು ಮನೆಗೆ ಕರೆದುಕೊಂಡು ಹೋದ.

ಇದನ್ನೆಲ್ಲಾ ಕೇಳಿದ ಮೇಲೆ ಪ್ರತಾಪನ ಕೋಪವು ತಣಿಯಿತು. ಪಾರ್ವತಿಗೆ ತಕ್ಕ ಶಾಸ್ತಿಯಾಯಿತೆಂದು ಸಮಾಧಾನವಾಯಿತು. ಇನ್ನು ತಾನು ಮೂಕವ್ರತವನ್ನು ನಿಲ್ಲಿಸಬಹುದು. ಏಕೆಂದರೆ ತನ್ನಮೇಲೆ ಪ್ರೇಮವಿಲ್ಲದವಳನ್ನು ಮದುವೆಯಾಗಲು ಪ್ರತಾಪನಿಗೇನೂ ಇಷ್ಟವಿಲ್ಲ. ಪ್ರತಾಪನು ನೇರಾಗಿ ರಾಜನ ಸನ್ನಿಧಿಗೆ

ಹೋಗಿ ತಾನು ಮೂಕನಾಗಿ ನಟಿಸಿದ್ದಕ್ಕೆ ಕ್ಷಮಾಪಣೆ ಕೇಳಿಕೊಂಡು, ಇದರ ಕಾರಣವನ್ನೆಲ್ಲಾ ಬಿನ್ನವಿಸಿಕೊಂಡ. ರಾಜನು ಎಲ್ಲವನ್ನೂ ಕೇಳಿ ಆಶ್ಚರ್ಯಪಟ್ಟು ಪಾರ್ವತಿಯನ್ನು ಕರೆಸಿದ.

ಪಾರ್ವತಿಯನ್ನು ನೋಡಿ ರಾಜ, "ಒಂದು ಸಣ್ಣ ತಪ್ಪಾಯಿತು. ನೀನು ಪ್ರತಾಪನಿಗೆ ಮಾಡಿದ ಚಿಕಿತ್ಸೆ ವ್ಯರ್ಥವಾಗಲಿಲ್ಲ. ತಪ್ಪಾಗಿ ನಿನಗೆ ಜುಲ್ಮಾನೆ ವಿಧಿಸಿದೆವು. ಈಗ ಪ್ರತಾಪನಿಗೆ ಮಾತು ಬಂತು. ನಿನ್ನ ಚಿಕಿತ್ಸೆ ಕೆಲಸಮಾಡಿತು. ಆದುದರಿಂದ ನಿನ್ನ ಜುಲ್ಮಾನೆಯನ್ನು ನಿನಗೆ ತಿರುಗಿಕೊಟ್ಟು, ಒಂದು ಲಕ್ಷ ರೂಪಾಯಿಯ ಬಹುಮಾನವನ್ನೂ ನಿನಗೆ ಕೊಡಲು ನಿಶ್ಚಯಿಸಿದ್ದೇವೆ. ತೆಗೆದುಕೊ" ಎಂದ.

ಈ ಮಾತಿಗೆ ಪಾರ್ವತಿ ಏನೂ ಸಂತೋಷಪಟ್ಟಂತೆ ಕಾಣಲಿಲ್ಲ. "ಮಹಾರಾಜಾ! ನಾನು ಬಹುಮಾನಕ್ಕೆ ಆಶೆಪಟ್ಟು ಆತನಿಗೆ ಚಿಕಿತ್ಸೆ ಮಾಡಿದ್ದಲ್ಲ. ನಾನು ಆತನಿಗೆ ದೊಡ್ಡ ದ್ರೋಹ ಮಾಡಿದೆ. ಆ ತಪ್ಪು ತಿದ್ದಿಕೊಳ್ಳಕ್ಕಾಗಿಯೇ ಪ್ರಯತ್ನಪಟ್ಟೆ. ಒಮ್ಮೆ ಆತನು ನನ್ನನ್ನು ಎಷ್ಟೋ ಪ್ರೇಮಿಸಿದ್ದ. ಆ ಪ್ರೇಮವನ್ನೆಲ್ಲಾ ನಾನು ಹೋಗಲಾಡಿಸಿಕೊಂಡುಬಿಟ್ಟೆ. ಅದೇ ಶಿಕ್ಷೆ ನನಗೆ! ಅವನಿಗೆ ನನ್ನಮೇಲೆ ಇನ್ನೂ ಪ್ರೇಮವಿದ್ದರೆ ನಾನು ಮಾತಾಡಬೇಕೆಂದು ಪ್ರಾರ್ಥಿಸಿಕೊಂಡಾಗಲೇ ಆತ ಮಾತಾಡುತಿದ್ದ. ನನ್ನ ಚಿಕಿತ್ಸೆ ವ್ಯರ್ಥವಾಯಿತೆಂಬುದೇ ಸತ್ಯ. ತಾವು ನನಗೆ ಯಾವ ಬಹುಮಾನವನ್ನೂ ಕೊಡಬಾರದು!" ಎಂದಳು ಪಾರ್ವತಿ.

ಈಗ ಪಾರ್ವತಿ ಪ್ರತಾಪನನ್ನು ಪ್ರೇಮಿಸುತ್ತಾಳೆಂದು ರಾಜನು ಗ್ರಹಿಸಿದ. ಅವನು ಪ್ರತಾಪನನ್ನುಕೂಡಾ ಕರೆಸಿ "ನೀವಿಬ್ಬರೂ ಈ ಪ್ರಕಾರವಾಗಿ ಒಬ್ಬರಿಗಾಗಿ ಒಬ್ಬರು ಬಾಧೆ ಅನುಭವಿಸುವುದು ಏನೂ ಚೆನ್ನಾಗಿಲ್ಲ. ನಿಮ್ಮ ಈ ಮೂಕವ್ರತವನ್ನು ಮುಗಿಸಿ ಮದುವೆಯಾಗಿಬಿಡಿರಿ" ಎಂದು ಅಪ್ಪಣೆಕೊಟ್ಟ.

ಆ ಒಂದು ಮಾತಿನಿಂದ ಅವರಿಬ್ಬರ ಕಷ್ಟಗಳೂ ಗಟ್ಟಿವೇರಿದುವು. ಅವರಿಬ್ಬರಿಗೂ ಮದುವೆಯಾಯಿತು. ಅರಸನು ವಧೂವರರಿಗೆ ಅನೇಕ ಬಹುಮಾನಗಳನ್ನು ಕೊಟ್ಟು, ಒಂದು ಲಕ್ಷ ರೂಪಾಯಿಯನ್ನೂ ಓದಿಸಿದನು. ಪ್ರತಾಪನು ಅರಸನ ಆಸ್ಥಾನದಲ್ಲಿದ್ದು ಖ್ಯಾತಿ ಗಳಿಸಿದ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1957 ಜೂನ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಏಪ್ರಿಲ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಒಂಟಿಯಾಗಿ ಕೂಗಲು, ಅರಣ್ಯ ರೋದನ

ಎರಡನೇ ಫೋಟೋ: ಒಟ್ಟಾಗಿ ಕೂಗಲು, ಕರ್ಣವೇದನ

ಕಳಿಸಿದವರು: ಇ. ಎಸ್. ರಾವ್,

ಸುರತ್ಕಲ್ಲು ಪೋಸ್ಟ್, ದಕ್ಷಿಣ ಕನ್ನಡ

**ಬಹುಮಾನ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**



# ಹದ್ದಿನ ರಹಸ್ಯ

ಹಿಂದಿನ ಸಂಚಿಕೆಯಲ್ಲಿ "ನರೀ ಸವಾರಿ" ಕತೆ ಓದಿದ್ದೀರಾ? ನರಿ 'ಉಕ್ಕ್ರೊವ್ವೋ' ಎಂದು ಬಿದ್ದು ಕತೆ ಮುಗಿಯಿತೆನ್ನುವಾಗ, ಸ್ವಲ್ಪ ಹೊತ್ತಿಗೆ ಅಲ್ಲಿಗೊಂದು ಹದ್ದು ಬಂತು. ಅದು ನರಿಯನ್ನು ನೋಡಿ, "ಅಯ್ಯೋ! ಪಾಪ! ನರಿ ಮಣ್ಣು ತಿಂದು ಹೋದನೇ!" ಎಂದಿತು.

ನರಿ ಮೆಲ್ಲನೆ ಎದ್ದು ಕುಳಿತು, "ಏನೆಂದೇ? ಈ ಮೊಲಕ್ಕೆ ತಕ್ಕ ಶಾಸ್ತಿ ಮಾಡದೆ ನಾನು ಸತ್ತೇನೇ?" ಎಂದಿತು.

"ಆ! ಮೊಲವೇ?" ಎಂದಿತು ಹದ್ದು.

"ಆ! ಈ ಮರದ ಪೊಟರೆಗೆ ತೂರಿಕೊಂಡಿದೆ. ಎಲ್ಲಿಗೆ ಹೋದೀತು. ಇಕೋ ಗಿಡುಗಣ್ಣಾ, ನೀನು ಈ ಪೊಟರೇ ಹತ್ತಿರ ಕಾಯುತ್ತಾ ಇರು. ನಾನು ಮನೆಗೆ ಹೋಗಿ ಕೊಡಲಿ ತರುತ್ತೇನೆ" ಎಂದಿತು ನರಿ.

"ಓ! ಇರುತ್ತೇನೆ. ಹೋಗಿ ಬಾ" ಎಂದು ಒಪ್ಪಿತು ಹದ್ದು. ನರಿ ಹೊರಟು ಹೋಯಿತು.

ಸ್ವಲ್ಪಹೊತ್ತಿನ ಮೇಲೆ ಪೊಟರೆಯೊಳಗಿದ್ದ ಮೊಲ, "ನರಿಯಣ್ಣಾ, ಓ ನರಿಯಣ್ಣಾ!" ಎಂದು ಕರೆಯಿತು. ಸ್ವಲ್ಪಹೊತ್ತು ತಾಳಿದ ಮೇಲೆ ಹದ್ದು, ನರಿಯ ಕೊರಳಿನಿಂದ, "ಯಾಕೆ?" ಎಂದು ಕೇಳಿತು.

"ಈ ಪೊಟರೇಲಿ ಎತ್ತಿನಂಥ ಹೆಗ್ಗಣ! ಗಿಡುಗಣ್ಣ ಇದ್ದರೆ ಎಷ್ಟು ಒಳ್ಳೆದಿತ್ತು!"

"ಇಲ್ಲೇ ಇದ್ದಾನೆ ಗಿಡುಗಣ್ಣ. ಹೆಗ್ಗಣನ ಹೊರಗೆ ದೂಡು" ಎಂದು ಹದ್ದು ಹೇಳಿತು.

"ಈಚೆ ಬದಿಗೆ ಪೊಟರೆಗೆ ನಾನೇ ಅಡ್ಡವಾಗಿದ್ದೇನೆ. ಆಚೆ ಬದಿಗೆ ಪೊಟರೇಬಳಿಗೆ ಗಿಡುಗಣ್ಣನ ಕಳಿಸು. ಇಕೋ ದೂಡುತ್ತೇನೆ" ಎಂದಿತು ಮೊಲ.

"ಹೆಯ್! ಛೀ! ಟುರ್!" ಎಂದು ಮೊಲ ಸಪ್ಪಳಮಾಡಿ ಪೊಟರೆಯಿಂದ ಇಣಿಕಿ ನೋಡಿತು. ಹದ್ದು ಮರದ ಹಿಂದಿನ ಬದಿಗೆ ತಿರುಗುತ್ತಲೇ ಹೊರಕ್ಕೆ ಧುಮುಕಿ, ಶರವೇಗದಿಂದ ಓಡಿಹೋಗಿ ತನ್ನ ಮನೆ ಸೇರಿತು.

ಮೊಲ ತಪ್ಪಿಸಿಕೊಂಡು ಹೋಯಿತೆಂದು ಹದ್ದಿಗೆ ಗೊತ್ತಾಯಿತು. "ಹುಂ, ಮೊಲ ಬಹಳ ಗಟ್ಟಿಗನೇ ಸರಿ. ಇನ್ನು ನಾನೊಬ್ಬನೇ ಏಕೆ

ಎಸ್. ನಂಜುಂಡಯ್ಯ

ಮೋಸಹೋಗಲಿ? ನರಿಯನ್ನೂ ಸ್ವಲ್ಪ ಕಾಡಿ ಮತ್ತೆ ಹೋಗುತ್ತೇನೆ" ಎಂದುಕೊಂಡು ಅಲ್ಲೇ ಕಾದು ಕಳಿತಿತ್ತು ಹದ್ದು.

ಇಷ್ಟರಲ್ಲಿ ನರಿ ಕೊಡಲಿಯನ್ನು ಭುಜದ ಮೇಲೆ ಹಾಕಿಕೊಂಡು ಬಂದು, "ಇರುವಿಯಾ? ಮೊಲ ಏನನ್ನುತ್ತೆ?" ಎಂದಿತು.

"ಸದ್ದೇಯಿಲ್ಲ ಪಾಪ. ನಿದ್ದೆ ಹೋಗುತ್ತೋ ಏನೊ!" ಎಂದಿತು ಹದ್ದು.

"ಓ! ಎಬ್ಬಿಸೋಣ ಈಗ" ಎನ್ನುತ್ತಾ ನರಿ ಕೊಡಲಿಯಿಂದ ಮರವನ್ನು ಕಡಿಯತೊಡಗಿತು.

ಹತ್ತು ಹನ್ನೆರಡು ಏಟು ಹಾಕಿ ನರಿ ಬಳಲಿ ಹೋಯಿತು. ಕೊಡಲಿಯನ್ನು ಕೆಳಗಿಟ್ಟು ಉಸ್ಸೋ ಎಂದು ಉಸಿರು ಬಿಡುತ್ತಾ ಶ್ರಮ ನಿವಾರಿಸಿಕೊಂಡಿತು. ಆಗ ಹದ್ದು ತನ್ನೊಳಗೆ ತಾನು ನಗುವುದನ್ನು ನೋಡಿ, ಏನೋ ಮೋಸವಾಗಿದೆಯೆಂದು ಗ್ರಹಿಸಿತು. ಹದ್ದನ್ನು ಚುರು ಚುರು ನೋಡುತ್ತಾ, "ಮೊಲ ನಿಜಕ್ಕೂ ಪೊಟರೆಯೊಳಗಿದೆಯೊ?" ಎಂದು ಕೇಳಿತು ಕೋಪದಿಂದ.

"ಇದೆ ನರಿಯಣ್ಣಾ. ಇದೆ, ಇದೆ. ಸುಳ್ಳಲ್ಲ. ನಿನ್ನಾಣೆ!" ಎಂದಿತು ಹದ್ದು.

ನರಿ ಪೊಟರೆಯೊಳಗೆ ನೋಡುತ್ತಾ, "ಆಕೋ ಇಲ್ಲಿ ಕಾಣಿಸುವುದು ಅದರ ಕಾಲೋ ನೋಡು ಸ್ವಲ್ಪ" ಎಂದಿತು.

ಹದ್ದು ಪೊಟರೆಯೊಳಗೆ ತಲೆ ಹಾಕಿತು. ಕೂಡಲೇ ನರಿ ಅದರ ತಲೆ ಹಿಡಿದು "ಭಂಡಾ! ನೀನುಕೂಡಾ ನನ್ನನು ಮೋಸಮಾಡುವಿಯಾ? ಬಿಟ್ಟೇನೇ? ನಿನ್ನನ್ನೀಗ ಏನು ಮಾಡುತ್ತೇನೆ ನೋಡು" ಎಂದಿತು.

"ಬಿಡೋ ನರಿಯಣ್ಣಾ! ನನ್ನನ್ನೇಕೆ ಹಿಡಿಯುತ್ತೀ?" ಹದ್ದು ಕೂಗಿತು.

"ಯಾಕೊ? ನಿನ್ನನ್ನು ಪೊಟರೇ ಹತ್ತಿರ ಕಾವಲಿಟ್ಟೆ. ಮೊಲ ತಪ್ಪಿಸಿ ಓಡಿತು. ಈ ಕಾಡಿನ ಪ್ರತಿ ಜಂತೂ ನನ್ನನ್ನು ಮೋಸಪಡಿಸಿದರೆ ನನ್ನನ್ನು ಯಾರು ಲಕ್ಷ್ಯ ಮಾಡಿಯಾರು? ಸಾಯು!" ಎನ್ನುತ್ತಾ ನರಿ ಹದ್ದಿನ ಬಾಲ ಹಿಡಿದು ನೆಲಕ್ಕೆ ಅಪ್ಪಳಿಸಲು ನೋಡಿತು. ಅದರ ಗರಿಗಳು ನಾಲ್ಕು ಕಿತ್ತುಬಂದುವು. ಹದ್ದು ಭರದಿಂದ ಹಾರುತ್ತಾ, "ನಿನ್ನ ಬುದ್ಧಿ ಮಣ್ಣು ತಿಂದಿತು!" ಎಂದಿತು. ಅದರ ರಭಸಕ್ಕೆ ನರಿ ಮತ್ತೆ ಮಗುಚಿಬಿತ್ತು. (ಮುಗೀಲಿಲ್ಲ)






ಪ್ರೊಫೆಸರ್ ಪಿ. ಸಿ. ಸರ್ಕಾರ್

"ದಿವ್ಯದೃಷ್ಟಿ" ಯನ್ನು ಪ್ರದರ್ಶಿಸುವಾಗ ಒಂದು ಹೊಸ ಕ್ರಮವನ್ನು ತೋರಿಸಲಕ್ಕೆ ಈ ಟ್ರಿಕ್ಕು ಉಪಯೋಗ ಬೀಳುತ್ತದೆ. ಐಂದ್ರಜಾಲಿಕನ ಕಣ್ಣಿಗೊಂದು ಬಟ್ಟೆ ಕಟ್ಟುತ್ತಾರೆ. ಆಗ ಅವನಿಗೇನೊಂದೂ ಕಾಣಲಾರದು. ತರುವಾಯ ಬೇರೆ ಬೇರೆ ಬಣ್ಣದ ಎರಡು ಡಜನು ಮಾಮೂಲು ಪೆನ್ಸಿಲುಗಳನ್ನು ತರಬೇಕು. ಅವುಗಳಲ್ಲಿ ಒಂದರ ಬಣ್ಣ ಇನ್ನೊಂದಕ್ಕಿರುವುದಿಲ್ಲ. ಒಂದರ ಆಕಾರವೂ ಇನ್ನೊಂದಕ್ಕಿರುವುದಿಲ್ಲ. ಅವುಗಳನ್ನೆಲ್ಲಾ ಒಟ್ಟಿಗೆ ಸೇರಿಸಿಟ್ಟರೆ ಯಾವ ಪೆನ್ಸಿಲು ಯಾವ ದೇಶದ್ದು–ಜಾಪಾನಿದ್ದಾ, ಬವೇರಿಯಾದ್ದಾ, ಅಮೇರಿಕದ್ದಾ, ಮದರಾಸಿನದಾ, ಬೊಂಬಾಯಿದಾ, ಕಲ್ಕತ್ತದ್ದಾ, ಢಿಲ್ಲಿಯದಾ— ಯಾರಿಗೂ ಗೊತ್ತಾಗುವುದಿಲ್ಲ. ಪೆನ್ಸಿಲಿನ ಅಕ್ಷರಗಳನ್ನು ಸಮಿಾಪದಲ್ಲಿ ನೋಡಿದರಷ್ಟೇ ಅವು ತಿಳಿಯಬೇಕು. ಈ ಪೆನ್ಸಿಲುಗಳನ್ನೆಲ್ಲಾ ಒಂದು ಟೋಪಿಯೊಳಗೆ ಹಾಕಿ ಚೆನ್ನಾಗಿ ಕಲೆಸಿಬಿಡುತ್ತಾರೆ. ಇವುಗಳಿಂದ ಪ್ರೇಕ್ಷಕರಲ್ಲಿ ಯಾರೊಬ್ಬರು ಯಾವುದೋ ಒಂದು ಪೆನ್ಸಿಲ್ ತೆಗೆದುಕೊಳ್ಳುತ್ತಾರೆ. ಆ ಪ್ರೇಕ್ಷಕ ಅದರ ವಿವರಗಳನ್ನು ತಿಳಿದುಕೊಂಡು ಇನ್ನೊಬ್ಬ ಪ್ರೇಕ್ಷಕನಿಗೆ ಅದನ್ನು ಕೊಡುತ್ತಾನೆ. ಹೀಗೆ ಅನೇಕ ಪ್ರೇಕ್ಷಕರು ಆ ಪೆನ್ಸಿಲಿನ ಬಣ್ಣ, ದೇಶ ಮತ್ತು ಇತರ ಗುರ್ತುಗಳನ್ನು ನೋಡಿಕೊಂಡ ಮೇಲೆ ಅದನ್ನು ಮತ್ತೆ ಟೋಪಿಯೊಳಗೆ ಹಾಕಿ ಇತರ ಪೆನ್ಸಿಲುಗಳೊಂದಿಗೆ ಕೂಡಿಸಿಬಿಡುತ್ತಾರೆ. ಬಳಿಕ ಆ ಟೋಪಿಯನ್ನು ಐಂದ್ರಜಾಲಿಕನಿಗೆ ಕೊಡಬೇಕು. ಆತ ಆ ಟೋಪಿಯೊಳಗಿಂದ ಪ್ರೇಕ್ಷಕರು ನೋಡಿದ ಅದೇ ಪೆನ್ಸಿಲನ್ನು ಎತ್ತಿ ಕೊಡುತ್ತಾನೆ! ತಪ್ಪಾಗಿ ಯಾವುದೋ ಪೆನ್ಸಿಲನ್ನು ಹಿಡಿದು "ಇದಲ್ಲ, ಇದಲ್ಲ" ಎಂದು ಹೇಳುತ್ತಾನೆ!

ಈ ಟ್ರಿಕ್ಕಿನಲ್ಲಿರುವ ರಹಸ್ಯವು ಸುಲಭವಾದುದೇ. ಐಂದ್ರಜಾಲಿಕನ ಅಸಿಸ್ಟೆಂಟುಗಳಲ್ಲೊಬ್ಬ ಮುಂದಾಗಿ ಪ್ರೇಕ್ಷಕರಲ್ಲಿರುತ್ತಾನೆ. ಪ್ರೇಕ್ಷಕರು ಪೆನ್ಸಿಲನ್ನು ಪರೀಕ್ಷಿಸಿದ ಮೇಲೆ ತಾನೂ ಅವರಲ್ಲೊಬ್ಬನಾಗಿ ಪರೀಕ್ಷಿ

ಸುವಹಾಗೆ ನೋಡಿ, ತನ್ನ ಕೈಯಿಂದಲೇ ಅದನ್ನು ಟೋಪಿಯೊಳಗೆ ಹಾಕುತ್ತಾನೆ. ಹಾಕುವ ಮೊದಲು ಆತ ತನ್ನ ಕೈಯಲ್ಲಿ ಅಡಗಿಸಿಕೊಂಡಿದ್ದ ಕೋಲ್ಡ್ ಕ್ರೀಮ್ ಕೊಂಚ ತೆಗೆದು ಪೆನ್ಸಿಲಿನ ಕೊನೆಗೆ ತಿಕ್ಕುತ್ತಾನೆ. ಅನಂತರ ಟೋಪಿಯಲ್ಲಿ ಪೆನ್ಸಿಲ್ ಕೊನೆಯನ್ನು ತಡವಿ ನೋಡಿದಾಗ ಐಂದ್ರಜಾಲಿಕನು ಆ ಪೆನ್ಸಿಲನ್ನು ಸುಲಭವಾಗಿ ಕಂಡುಹಿಡಿದುಬಿಡುತ್ತಾನೆ.

ನಾನೊಮ್ಮೆ ಈ ಟ್ರಿಕ್ಕನ್ನು 'ಚೂಯಿಂಗ್ ಗಮ್' ಸಹಾಯದಿಂದ ಮಾಡಿದ್ದೆ. ಇದೇ ರೀತಿ ಮೈಣವನ್ನು ಕೂಡಾ ಉಪಯೋಗಿಸಬಹುದು.

ಪ್ರೇಕ್ಷಕರೊಂದಿಗಿರುವ ಅಸಿಸ್ಟೆಂಟು ತನ್ನ ಕರವಸ್ತ್ರದಲ್ಲಿ ಹಿಮಗಡ್ಡೆಯನ್ನು ಅಡಗಿಸಿಟ್ಟುಕೊಂಡರೆ ಅವನು ಪೆನ್ಸಿಲ್ ಕೊನೆಯನ್ನು ಅದರಿಂದ ತಣ್ಣಗೆ ಮಾಡಿ ಟೋಪಿಗೆ ಹಾಕಬಹುದು. ಐಂದ್ರಜಾಲಿಕನು ಪೆನ್ಸಿಲುಗಳನ್ನು ಮುಟ್ಟುವಾಗ ಆ ತಣ್ಪಿನಿಂದಲೇ ಆ ಪೆನ್ಸಿಲನ್ನು ಕಂಡುಹಿಡಿಯುತ್ತಾನೆ.




[ಈ ಗಾರುಡಿಯನ್ನು ಕುರಿತು ಇನ್ನೇನಾದರೂ ಸಲಹೆ ಬೇಕಾದರೆ, ಇಂಗ್ಲೀಷಿನಲ್ಲಿ ಬರೆಯಿರಿ: ಪ್ರೊಫೆಸರ್, ಪಿ. ಸಿ. ಸರ್ಕಾರ್, [ಮೆಜಿಷಿಯನ್, ಬಾಲೀಗಂಜ್, ಕಲಕತ್ತಾ-19.]



# ವಾರ್ತೆಗಳು-ವಿಶೇಷಗಳು

ಮೈಸೂರು ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಕಳೆದ ಫಿಬ್ರವರಿ ತಿಂಗಳಲ್ಲಿ ಇದೊಂದು ಅಮೂಲ್ಯ ಅಭಿಪ್ರಾಯವನ್ನು ಹೊರಗೆಡವಿದ್ದಾರೆ. ರಾಯಚೂರಿಗೆ ೭೨ ಮೈಲು ದೂರದಲ್ಲಿರುವ ಕಮಲದಾತ್ರಿಗೆ ಸಮೀಪದಲ್ಲಿ ನಿರ್ಮಿಸಲಿರುವ ಕೃಷ್ಣಾ ತಳತಟ್ಟು ಪ್ರಾಜೆಕ್ಟಿನಿಂದ ರಾಯಚೂರು ಗುಲ್ಬರ್ಗಾ ಜಿಲ್ಲೆಗಳಲ್ಲಿಯ ಹಿಂದುಳಿದ ಪ್ರಾಂತಗಳಿಗೆ ವಿಶೇಷ ಪ್ರಯೋಜನವುಂಟು—ಎಂದು ಅವರು ಒಂದು ಮಹಾಸಭೆಯಲ್ಲಿ ಭಾಷಣಮಾಡುತ್ತ ವ್ಯಕ್ತಪಡಿಸಿದರು. ಈ ಅಗತ್ಯವನ್ನು ದ್ವಿತೀಯ ಪಂಚವಾರ್ಷಿಕ ಪ್ರಣಾಳಿಕೆಯಲ್ಲಿ ಸೇರಿಸಲು ಪ್ರಯತ್ನಿಸಲಿಕ್ಕಾಗಿ ಆ ಮಹಾಸಭೆಯೇರ್ಪಡಿಸಲಾಗಿತ್ತು. ಇದಕ್ಕಾಗಿಯೇ ಒಬ್ಬ ಇಂಜಿನಿಯರನ್ನು ನಿಯಮಿಸಿ ೧೩ ಲಕ್ಷ ರೂಪಾಯಿ ಮಂಜೂರಾಗಿದೆಯೆಂದೂ ಹೇಳಿದರು.

೬-೨-'೫೭ರಲ್ಲಿ ಮಾಲೂರಿನಲ್ಲಿ ಪುರ ಪ್ರೌಢಶಾಲೆಯ ಹಳೆಯ ವಿದ್ಯಾರ್ಥಿ ಸಂಘದ ವಾರ್ಷಿಕ ಆರಂಭ ಭಾಷಣವನ್ನು ಮಾಡಲು, ಕರ್ಣಾಟಕದ ಸುಪ್ರಸಿದ್ಧ ಕತೆಗಾರ-ಕಾದಂಬರಿಕಾರರಾದ ಶ್ರೀ ಅ. ನ. ಕೃಷ್ಣರಾಯರು ಆಗಮಿಸಿದ್ದರು. ಪ್ರಾರ್ಥನೆ ಮತ್ತು ಸಂಘದ ವರದಿಯಾದಮೇಲೆ ಶ್ರೀ ಅ. ನ. ಕೃಷ್ಣರಾಯರು ಈಗಿನ ಶಿಕ್ಷಣದಮೇಲೂ, ಹಾಗೂ ಉಪನಿಷತ್ತಿನ ವಿಚಾರ ಮತ್ತು ಕಾವ್ಯಗಳ ವಿಚಾರವಾಗಿ ಭಾಷಣಮಾಡಿದರು. ಅಧ್ಯಕ್ಷರಾದ ಕೆ. ಯನ್. ಕೃಷ್ಣಮೂರ್ತಿರಾಯರ ಭಾಷಣವಾದಮೇಲೆ ರಾಷ್ಟ್ರಗೀತೆಯೊಂದಿಗೆ ಸಭೆ ಮುಗಿಯಿತು.

* * *

ಇಂಡಿಯಾದಲ್ಲಿ ಸ್ಥಾಪಿಸಿದ ಮೊತ್ತಮೊದಲಿನ ಯಾಟಮಿಕ್ ರಿಯಾಕ್ಟರನ್ನು ಪಂಡಿತ ಜವರಲಾಲ್ ನೆಹರುಗಳು ಆವಿಷ್ಕರಣ



ಮಾಡಿ, ಅದಕ್ಕೆ 'ಅಪ್ಸರೆ' ಎಂದು ನಾಮಕರಣ ಮಾಡಿದ್ದಾರೆ.

* * *

ಸಿರಿಯಾ ಪ್ರೆಸಿಡೆಂಟು ಷುಕ್ರಿ-ಎಲ್-ಕುವಾಟ್ಲೀಯವರು ಜನವರಿಯಲ್ಲಿ ನಮ್ಮ ದೇಶಕ್ಕೆ ಬಂದು ಮುಖ್ಯ ಪ್ರದೇಶಗಳಲ್ಲಿ ಪರ್ಯಟನೆಮಾಡಿದರು. ಅವರು ಭಾಕ್ರಾ-ನಂಗಲ್ ಪ್ರಾಜೆಕ್ಟನ್ನು ನೋಡಿ 'ಪ್ರಪಂಚದಲ್ಲಿ ಈ ಪ್ರಾಜೆಕ್ಟಿಗೆ ಇದುವೇ ಸಾಟಿ' ಎಂದು ಮೆಚ್ಚಿಕೊಂಡಿದ್ದಾರೆ.

* * *

**ಪೂ**ರ್ವ ಇಂಡೊಸೀನಿಯಾ ದೇಶದೊಳಗಿನ ಫ್ಲೋರೆನ್ ದ್ವೀಪಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಒಂದು ತಲೆಬುರುಡೆ ದೊರಕಿದೆ. ಇದನ್ನು ಇಂಡೋನೀಸಿಯಾದ ಪುರಾತತ್ವ ಶಾಸ್ತ್ರವೇತ್ತರು ಪರಿಶೋಧನೆ ಮಾಡಿದರು.

ಈ ತಲೆಬುರುಡೆ ೧೦ ಲಕ್ಷ ವರ್ಷಗಳ ಕಳಗಿನದೆಂದು ಡಚ್ ಪುರಾತತ್ವ ಶಾಸ್ತ್ರಜ್ಞರಾದ ಡಾ. ಟಿ. ಹೆಚ್. ವೆರ್‌ಹೊಲೆನ್ ತಿಳಿಸಿದರು. ಈ ಬುರುಡೆಯ ಮೇಲುದವಡೆಯಲ್ಲಿ ಐದು ಹಲ್ಲುಗಳು, ಕೆಳದವಡೆಯಲ್ಲಿ ನಾಲ್ಕು ಹಲ್ಲುಗಳು ಉಳಿದಿವೆ.

**ರೈ**ಲುಪಟ್ಟಿಯ ಮೇಲೆಯೂ, ಸಾಧಾರಣ ರಸ್ತೆಯಲ್ಲಿ ವೇಗವಾಗಿ ಸಾಗಬಲ್ಲಂಥ ಹೊಸ ತರದ ಗಾಡಿ ಇದೇ ೧೯೫೭ ರಲ್ಲಿಯೇ ಸಿದ್ಧವಾಗುತ್ತದೆಂದು, ಅಮೇರಿಕೆಯ ರೈಲು ಪಟ್ಟಿಯ ನಿರ್ಮಾಣದಲ್ಲಿ ಹೆಸರುಪಡೆದ ಒಂದು ಕಂಪೆನಿಯವರು ಪ್ರಕಟಿಸಿದ್ದಾರೆ.

* * *

**ದೇ**ಶದಲ್ಲಿ ಹೊಸತಾಗಿ ಮತ್ತೆ ೨೨ ಕಾಗದ ತಯಾರಿಸುವ ಫಾಕ್ಟರಿಗಳನ್ನು ಸ್ಥಾಪಿಸಲು ಕೇಂದ್ರ ಸರಕಾರವು ಅನುಮತಿಯಿತ್ತಿದೆ. ಇವುಗಳೊಂದಿಗೆ ಪ್ರಸ್ತುತ ಇರುವ ೨೧ ಕಾಗದ ಫ್ಯಾಕ್ಟರಿಗಳೂ ಕೂಡಿ ದ್ವಿತೀಯ ಪಂಚವಾರ್ಷಿಕ ಪ್ರಣಾಳಿಕೆ ಮುಗಿಯುವಾಗ ಸರಾಸರಿ ೫.೪ ಲಕ್ಷ ಟನ್ನು ಕಾಗದಗಳ ಉತ್ಪತ್ತಿಯಾಗಬಲ್ಲುದು.

* * *

ಫಿಲಿಪ್ ಡಿವಿಜನ್‌ನವರು 'ಕ್ರೂರ ಕೀಟಗಳು' ಎಂಬ ಹೆಸರಿನ ಒಂದು ಡಾಕ್ಯುಮೆಂಟರೀ ಚಿತ್ರವನ್ನು ತಯಾರಿಸಿರುತ್ತಾರೆ. ಭಾರತದೇಶದಲ್ಲಿ ಇಲಿ, ಮಿಡತೆ ಮತ್ತಿತರ ಕೀಟಕಗಳಿಂದ ವರ್ಷಕ್ಕೆ ೫೦೦ ಕೋಟಿ ರೂಪಾಯಿ ಬೆಲೆಬಾಳುವ ಪೈರು ನಾಶವಾಗುತ್ತದೆ!



## ಚಿತ್ರ ಕಥೆ





ಒಂದು ದಿನ ವಾಸು ಮತ್ತು ಗೋಪಿಯರು 'ಟೈಗರಿ' ನೊಂದಿಗೆ ಹೊರಟರು. ಹೊಲದಲ್ಲಿ ಅವರಿಗೊಬ್ಬ ಹುಡುಗ ಕಾಣಿಸಿದ. ಅವನ ಹತ್ತಿರ 'ಟೈಗರಿ'ಗಿಂತ ನಾಲ್ಕು ಪಾಲು ದೊಡ್ಡದಾದ ನಾಯಿಯಿತ್ತು. ಅದನ್ನು ಟೈಗರಿನೊಂದಿಗೆ ಓಟದ ಪಂದ್ಯಕ್ಕೆ ಬಿಡುತ್ತೇನೆ ಎಂದ ಆ ಹುಡುಗ. ಸರಿಯೆಂದು ವಾಸೂ ಗೋಪಿಯರು ಒಪ್ಪಿದರು. ಒಂದು ನಿರ್ದಿಷ್ಟ ಸ್ಥಳದಲ್ಲಿ ಪಂದ್ಯ ಪ್ರಾರಂಭವಾಯಿತು. ಎರಡೂ ಓಡತೊಡಗಿದುವು. ಹಿಂದೆಬಿದ್ದ 'ಟೈಗರ್' ದೊಡ್ಡ ನಾಯಿಯ ಬಾಲವನ್ನು ಕಚ್ಚಿಕೊಂಡಿತು. ಅದು ನೋವಿನಿಂದ ಖ್ಯೊಂಯೆಂದು ತಿರುಗಿದ್ದೇ ತಡ, 'ಟೈಗರ್' ಅದಕ್ಕಿಂತ ಮುಂದೆ ಹಾರಿ ಪಂದ್ಯ ಗೆದ್ದಿತು !





Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26—Controlling Editor: SRI 'CHAKRAPANI'

Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

ಒಟ್ಟಾಗಿ ಕೂಗಲು
ಕರ್ಣವೇದನ

ಕಳಿಸಿದವರು:
ಇ. ಎಸ್. ರಾವ್

